# ಮಂದಾರ ಮಾಲಿಕಾ

ಮಲ್ಲಿಕಾ

ಬೋದ್ಧಾರೊ ಮತ್ಸರಗ್ರಸ್ತಾಃ
ಪ್ರಭವಸ್ಮಯ ದೂಷಿತಾಂ ।
ಅಬೋಧೋಪಹಾಶ್ಚಾನ್ಯೇ
ಜೀರ್ಣಮಂಗೇ ಸುಭಾಷಿತಂ ॥

Mandara Malika in Kannada by 'Mallika'
Published by Lakshmi Prakashana,
7, Langford Road, Bangalore-560 025.

ಪ್ರಥಮ ಮುದ್ರಣ : ೧೯೮೬
ದ್ವಿತೀಯ ಮುದ್ರಣ : ೧೯೮೭



ಬೆಲೆ : ಹತ್ತು ರೂಪಾಯಿ

ಮುದ್ರಕರು :
ನ್ಯೂ ಐಡಿಯಾಸ್
30, 15ನೇ ಅಡ್ಡರಸ್ತೆ
ಮೂರನೆಯ ವಿಭಾಗ ಜಯನಗರ
ಬೆಂಗಳೂರು-560 011

# ಪರಿವಿಡಿ

# ನೀ ಬರುವೆ ಎಂದು

ಸೋಪಾನವಿಳಿದು ತಿಳಿನೀರಿನೊಳು ಮಿಂದು
ನದಿಯ ತಡಿಯುಲಿ ನಿಂದೆ ನೀ ಬರುವೆ ಎಂದು
ಪಡುವಣಕೆ ಪೊನ್ನೇಸರ್ ಇಳಿದಿಹ ನಿಂದು
ಆದೊಡಂ ನೀನೇಕೆ ಬರಲಿಲ್ಲ ಬಂಧು ?

ಹರಿದಿದೆ ಜಲರಾಶಿ ಜುಳುಜುಳು ರಾಗದಲಿ
ಹರಿಯುವ ಪರಿಪಾಠದವೊಲ್ ನಿಲ್ಲದಲಿ
ಬೆಳ್ನೊರೆಯ ಫೇನ ಪುಂಜವೊಟ್ಟ ಬದಿಯಲಿ
ಸಾಗಿಹುದು ನೀನೇಕೆ ಬರಲಿಲ್ಲ ಇನ್ನು ?

ಜಲಪಕ್ಷಿಗಳು ಅರಸುತಿವೆ ಗೂಡಿಗಾಗಿ
ಗಗನದಲಿ ಸುತ್ತುತಿವೆ ಸುತ್ತಿ ಸುಳಿಯಾಗಿ
ಮೆಲ್ಲುಲಿಯಲಿ ಮರಿಗಳ ಕರೆಕರೆದು ಕೂಗಿ
ನಾನಿಲ್ಲಿ ಕರೆದು ಬೇಡುತಿಹೆ ನಿನಗಾಗಿ.

ದೂರದಿಂದ ಬೀಸುತ ಬರುವ ಬನಗಾಳಿ
ತಳಿರೊಳಗೊಳಗೆ ನಲಿನಲಿದು ಬರಲ್ ನುಸುಳಿ
ಗಳಿಗೆ ಗಳಿಗೆಗಳು ಕಳೆದು ಹೋದುವು ಉರುಳಿ
ಕೋಗಿಲೆಯು ಹಾಡುತಿದೆ ಬಾರಯ್ಯ ಕೇಳಿ.

ಮುಸ್ಸಂಜೆ ಮುಸುಗಿ ಇಳೆಗಿಳಿಯುತಿದೆ ರಾತ್ರಿ
ಕಾದು ಬೇಸತ್ತುದೆನ್ನಯ ಹೃದಯ ಧಾತ್ರಿ
ಇನ್ನಾದೊಡಂ ತಳ್ವದೆಯ ಬಾರೈ ಬಂಧು
ಅರಿತರಿತು ನೀನೇಕೆ ಬರಲಿಲ್ಲ ಇಂದು ?

—o—

# ಶೃಂಗೇರಿ

೧

ತುಂಗಾ ನದೀ ತೀರದಲಿಹ ಶಾಂತ
ಪ್ರಶಾಂತನಿಶಾಂತವಾಶಾಂತ
ಸ್ವರ್ಗ ಸದೃಶ ನಿಸರ್ಗ ಸೌಂದರ್ಯವು
ಪೊದಳ್ದಿರ್ದಲ್ ದರ್ಶನೀಯವಮಾ
ಪಚ್ಚ ಪಸುರಿನ ಪಸೆಯುಲಿ ಸುಶೋಭಿತ
ಶ್ರೀ ಶಂಕರರ ವರ ಕೃಪೆಯೊಳ್
ಪಡಿಮೂಡಿ ಪ್ರಸಿದ್ಧಿ ಪಡೆದಿಹ ತೀರ್ಥ
ಯಾತ್ರಿಯ ಕ್ಷೇತ್ರವೆ ಶೃಂಗೇರಿ.
ಅಹಹ, ಪ್ರಕೃತಿ ದತ್ತ ಮನ ಮೋಹನ
ವನಸ್ಥಲಿ ರಸದೃಷ್ಟಿಗೆ ಸುರ-
ಲೋಕವೆನಲ್ ಅತ್ಯುಕ್ತಿಯಲ್ಲ ಕಣ!
ವರನದೀ ತಟನಿಯ ಸುರಮ್ಯ
ಸಮುದಾಣದ ಸುತ್ತಲು ಬೃಹತ್ ಕೋಂಟೆ
ಕಟ್ಟಿ ನಿಂದಿರುವ ಬೆಟ್ಟಗಳ
ಮಾಶ್ರೇಣಿಯು ಮಧ್ಯೆ ನೆಲೆ ನಿಂದಿರುವ
ಸ್ವರ್ಗ ಸದೃಶ ದೇಗುಲ ಶ್ರೀ
ವಿದ್ಯಾ ಶಂಕರರ ಆತ್ಮ ಜ್ಯೋತಿ
ಭಕ್ತ ಜನರಿಗೆ ಶಾಂತಿ ದೀಪ!

೨

ಪುರಾಣೀಯ ಕಾಲದ ಪರಮ ಪುಣ್ಯ
ಪ್ರಭಾತದಲಿ ಜಾನ ನದಿಯೊಳ್

ನೆರೆ ಮಿಂದು ಮುಡಿಗೊಂಡ ಗುರು ಶಂಕರ
ಪ್ರಾಚಾರ್ಯ ಕೇಸರಿಯು ಕೆರಳಿ
ಗರ್ಜಿಪವೊಲ್ ಗರ್ಜಿಸುತಲಿದು ತತ್ತ್ವ
ಮೀಮಾಂಸೆಯಲಿ ಮನಃಚಿತ್ತ
ಮಥಿಸಿ ಜೊಳ್ಳನು ತೂರಿ ಮತಿ ಮಾನ್ಯರ
ಮನ ಮಿಡಿಸಿದ ಮಾಮೇಧಾವಿ!
ಮೂಕ ಮೌನಿಗೆ ಮಾತುಗಲಿಸಿ ನುಡಿಸಿ
ಓಜೆಯಂ ನೆರೆಯೋಜಿಸಿ ಘನ
ಭಕ್ತಿ ಭಾವ ಮೂಡಿಸಿ ನಾಸ್ತಿಕನನು
ಆಸ್ತಿಕಗೊಳಿಸಿದ ಪುಣ್ಯ ಗುರು
ಶ್ರೀ ಶಂಕರಾಚಾರ್ಯರ್ ಶ್ರಮವಹಿಸಿ
ಸಂಸ್ಥಾಪಿಸಿದ ಶ್ರೀಮಠವೇ
ರಾಷ್ಟ್ರಮಾನ್ಯತೆ ಪಡದಿಹ ಶೃಂಗೇರಿ!

೩

ತುಂಗೆ ಹರಿಯೆ ಶಾಂತಿರಸವನು ಸೂಸಿ
ಪಶ್ಚಿಮಾದ್ರಿಯ ಮೇಲೆ ತೇಲಿ
ಬಹ ಮಾರುತನ ತಾನವಿತಾನದಲಿ
ವನಸಿರಿ ಸೊಬಗಿನ ಶ್ರೀಗಂಧ,
ಆಲ, ಶ್ರೀಹೊನ್ನೆ, ಹಲಸು, ಮಾವುಗಳ
ಪೆರ್ಗೊಂಬೆಯಲಿ ವಾಸಿತ ಗಿಳಿ,
ಕಾಮಳ್ಳಿ, ಕಲವಿಂಕ, ಚೋರೆ, ತೇನೆ,
ಕಾಜಾಣ, ಶುಕ ಪಿಕಗಳಾದಿ
ಪಕ್ಷಿಕೋಟಿಯು ರಾಗಾನುರಾಗದುಲಿ
ಓದುತಿದೆ ಮಂತ್ರ ಸಂದೇಶ
"ಬ್ರಹ್ಮೈವ ಸತ್ಯಂ ಜಗನ್ಮಿಥ್ಯಾ"
ಆಗಳಾ ಎಲೆಎಲೆಗಳಲುಗಿ →

ಮರ್ಮರಿಸಿ ಪಕ್ಷಿಗಳುಲಿಗೆ ಮುದದಿಂದ
ಶೃತಿ ಮಿಡಿಂಟಲ್ ಲಾಲಿಸು ಮನವೆ!
ಸಗ್ಗವೇ ಧರಣಿಗಿಳಿತಂದವೋಲ್
ಮೇಣಿಂದ್ರನ ನಂದನವನವೆ
ತಾನಾದವೊಲ್ ಸುರ ಸೌಂದರ್ಯ ಕಾಣ್ !
ಮೇಣ್ ಪರಿಸರದಿ ವೈಮನ
ಮರೆಸುವನಿತು ಭಕ್ತಿ ಭಾವ ಘನಿಸುವ
ಚಿನ್ಮಯಿ ರಕ್ಷೆಯಿರಲ್ ಎನಿತು
ಶಾಂತಿ ಸಮಾಧಾನಗಳೋ ಮನೋದಧಿಗೆ.
ಪಚ್ಚನೆ ಪರ್ಣಾರ್ಣವದಲಿಹ
ಶಾಂತಿಯನಣಕಿಸುವೊಲ್ ವರ ಶಾಂತಿ!
ಪಕ್ಷಿಗೊರಳ ರಾಗಾಲಾಪ
ಎರ್ದೆಯಂ ತಣಿಸುವಂತಿರೆ ಸುಂದರ
ಬನ; ಸುಂದರ ಇನ; ಸುಸುಂದರ
ದೇಗುಲ; ಸುರ ಸುಂದರವಾ ಕ್ಷೇತ್ರಂ!

೪

ಬೃಹದ್ ಗಿರಿ ಶೃಂಗಗಳ ಪದ
ಪಾವನಿ ಜುಳುಜುಳು ರಾಗವ ಹಾಡುತ
ಹರಿಯುವ ತುಂಗೆಯೆ ನೀನಿಲ್ಲಿ
ಪರಮ ಧನ್ಯೆ! ತಾಯಿ ಶಾರದೆಯ ಶ್ರೀ
ನಾಡಿನ ಪುಣ್ಯ ತೀರ್ಥವಾಗಿ
ನಿತ್ಯ ಪ್ರವಹಿಸುವೆ ಬತ್ತದೆ ಬಾಡದೆ !
ಶ್ರೀಶ್ರೀಮದ್ ಆಚಾರ್ಯ ಸಿರಿ
ಪರಂಪರೆಯ ಜೀವನಾಡಿಯಾಗಿಹೆ
ಮೇಣ್ ಜೀವಕೋಟಿಯ ಬಾಳ್
ಬನಕೆ ಆಶ್ರಯದಾತೆ, ಪರಿಪೋಷಿಣಿ!
ಲೋಕಪೂಜಿತೆ, ಪುಣ್ಯಾವನಿ 

ನಿನ್ನೊಡಲ ಪಿಠಾರಿಯಲಿ ಎನಿತೆನಿತು
   ಜೀವಾಳಿಯೊ ಅನಿತನಿತೆ ಸಿರಿ
ಸಸ್ಯಾಳಿಯ ಪರಿಪುಂಜಂತಾಯೆ !
   ಅಲಲೆ ! ಎಂತುಟು ಸರಾಗದಲಿ
ಮೇಣ್ ಹರಿಸದಲಿ ಉತ್ಸುಕ ಹಿರಿ–ಕಿರಿ
   ಮೀಂಗಳ್ ಮುಲುಗಾಡುತಲಿ
ದಂಡು ದಂಡೈಸಿ ಮುನ್ನುಗ್ಗಿ ಬರುತಿವೆ
   ಭಕ್ತರು ಈಯುವ ಕಡಲೆ ಪುರಿ
ಮುಂತಪ್ಪ ತಿನಿಸುಗಳಿಗಾಗಿ ಬಾಯಿ
   ಬಿಡುತ ಸಾಲು ಮೆಟ್ಟಲ ಬಳಿಗೆ !
ಅಹ ! ಆ ದರ್ಶನೀಯಮಾದ ಚಿತ್ರ
   ಏಂ ರೋಮ ಹರ್ಷಕವೊ ಮನವೆ !

೫

   ಶೃಂಗೇರಿ ಶಾರದಾ ದೇವಿ
ಸನ್ನಿಧಿಯೊಳ್ ಧ್ಯಾನಮಗ್ನಳಾಗಿರೆ
   ಎದೆಯಲಿ ಭಕ್ತಿರಸ ಘನಿಸಿತು
ಹೆಪ್ಪುಗಟ್ಟಿದವೊಲ್ ! ಅಹ, ಎನಿತೆನಿತು
   ಸೌಭಾಗ್ಯವೊ ದೇವಿದರ್ಶನ !
ಪರಮೋಚ್ಚ ಪ್ರತಿಷ್ಠಾನ
   ಸತ್ಯ ಸದೃಶಮಾದುದು ಕಣ !

—o—

# ವರ್ಡ್ಸ್‌ವರ್ತ್

ಆಂಗ್ಲಭಾಷಾ ಸರಸತಿಯು ಪುತ್ರ ಧೀಮಂತ
ಅಷ್ಟಾದಶ ಶತಮಾನ ಸಾಹಿತ್ಯಧಾರಾ
ಶಕ್ತಿ ಓಜೆಯನೆ ಓಜಿಸಿತ್ತೆ ಕವಿ ತಾರೆಯ್ಸೈಸಿ!
ಸಾರಸ್ವತಲೋಕ ಪೂಜಿತರು ನಿನ್ನಯ ಕೀರ್ತಿ
ಕಸ್ತೂರಿ ಪರಿಮಳ ಭ್ರಾಂತರ್ ಹೇ! ವರ್ಡ್ಸ್‌ವರ್ತ್!
**Cocker mouth in cumber land**
ಎಂಬ ತಾಯ್ನೆಲದಲಿ ಜಗ ಬೆಳಕಂ ಕಂಡ ಕವಿ
ಬಾಲ್ಯ ವಿದ್ಯಾಭ್ಯಾಸಮಂ ಜನ್ಮಸ್ಥಳದಲಿ
ಪಡೆದನಂತರಂ ಫ್ರಾನ್ಸ್, ಇಂಗ್ಲೆಂಡ್‌ಗಳಲಿ
ಗಳಿಸಿ ವಿದ್ಯೆ ಕವಿಕೃತಿಗೈಯಲಮಲ ಗತಿಮತಿಗೆ
ಕಡೆದು ಚಿತ್ರಕಲ್ಪವ, ಪಡೆದೆ ಸುಜ್ಞಾನ ಸ್ಫೂರ್ತಿ
ಪ್ರಕೃತಿಯ ಸಂಸರ್ಗದಿಂ ಶಾಂತಿ ಸೌಭಾಗ್ಯದ
ರಸನೆ ಭಾವನದಿಯಾಗಿ ಪ್ರವಹಿಸುತಿರೆ ಮನಂ
ಬಿಸಿಲಟ್ಟಿದ ಮಂಜಿನೊಲ್ ಕರಗಿ ದ್ರವಿಸಿದೊಡಂ
ನಿನ್ನ ಒಮ್ಮನ–ಒಮ್ಮತಗಳಿಂದೊಪ್ಪಿದರೇನ್ನೈ
ದಿಟ್ಟ ಪಂಡಿತವರ್ಗ? ಎಲ್ಲಿ ಮೇಲ್ಮೆಯೊ ಅಲ್ಲಿ
ಹಿಂದೆಳೆವ ಕುತ್ಸಿತ ಕುಮತಿಗೆ ಕೊರತೆಯಿಲ್ಲವೈ
ಎಲ್ಲೆಡೆಯು! ನೀನಹುದು ವರಕವಿ! ತವ ಚಿಂತನಾ
ವೇಶಕೆ ರಸ ಖುಷಿ ಜೀವನಕೆ–ಶಾಂತಿ ಕನಿಕರ
ಸ್ವಭಾವಕೆ ಜನಾದರಣೀಯತೆಯು ತಂತಾನೆ
ಒದವಿತ್ತೈ ಕತ್ತಲೆಯೊಳ್ ದೀಪವ ಹಚ್ಚಿದವೊಲ್.
ಹೇ ಕವಿಯೆ! ನಿನಗೆನ್ನ ವಿನಮ್ರನಮನಂ! ಕವಿ
ಕಾವ್ಯಕಾನನದ ಮಿಡಿ ಮೊಗ್ಗಾಗಿ ನಮಿಸುವೆಂ!

—o—

# ಊರ್ಮಿಳಾದೇವಿ

ಯುಗಯುಗಗಳಾಚೆಯಾ ರಾಮಾಯಣದ ರನ್ನ
ವೇದಿಯಲಿ ತೊಳಗಿ ಬೆಳಗಿದ ರಾಮ ಲಕ್ಷ್ಮಣ
ಸೀತೆಯರ ಉಜ್ವಲೋಜ್ವಲ ಕಿರಣಗಳಿಂದಲಿ
ನಿನ್ನ ವ್ಯೈಮೆ ಕಣ್ಮರೆಯಾಗಿರ್ಪುದೊ ಎನಲ್ಕೆ
ನೀಂ ಪಿಂದುಳಿದೆಯಲಿ ಕಾನನದ ಮೊಲ್ಲೆಯೊಲ್ !
ಪತಿಯು ಅಗ್ರಜನ ಸೇವೆಗೆಂದು ಪೊರಡಲಡವಿಗೆ
ಅನ್ಯಥಾ ಬಂದೊದವಿದ ಕಠಿಣವಿರಹವೆಂತು
ಮೂಕಮೌನದಿ ತಾಳ್ದಿಯೊ ಪರಮಸತಿ ಊರ್ಮಿಳಾ !
ಜಗದ ಕಣ್ಗೆ ಬೀಳದೆ ತೆರೆಮರೆಯಲಿ ತಪವಂ
ನೋಂತೆ ದೀರ್ಘ ಸಂಯೋಜನೆಗೆತ್ತು,
ಲಕ್ಷ್ಮಣ ಹೃದಯ ಕಾನನ ಮೋದಿನಿ ! ಸಂಪ್ರೀತೆ !
ವರ ತಪಸ್ವಿನೀಲೆ ! ತ್ರಿಭುವನ ವಂದಿತ ಋಷಿಗಳ
ಅನನ್ಯ ಅನುಪಮ ಛಾಯೆ ! ಪರಮ ಸತೀ ಸಾಧ್ವಿ !
ಭಾರತ ಜನನಿಯ ಸಂಸ್ಕೃತಿವೆಸರಿಗೆ ನೀನೇ
ಪ್ರಪ್ರಥಮ ಕೀರ್ತಿಮಾಲೆ ! ಮಹಾ ಪರಂಜ್ಯೋತಿ !
ನಿನ್ನ ಸಂಜೀವನೀಯ ಪಾತ್ರ ಕವಿಯ ಚಿತ್ತ-
ಕಲ್ಪಕಲ್ಲದೆಲ್ಲಿಯ ಅಳವು ? ಬರಿಗಣ್ಣಿಗದು
ಕ್ಷಣ ಭಂಗುರದೊಲ್ ಮಿನುಗಿ ಮಾಯವಾಗುವಾ
ಕ್ಷಣಿಕ ಕಥನಂ ಎನಲ್ ಅಚ್ಚರಿಯ ಮಾಲೆ ಕಣ !

—o—

# ಸರ್ ಜಗದೀಶಚಂದ್ರ ಬೋಸ್

ಭಾರತೀಯ ವಿಜ್ಞಾನ ಪ್ರಪಂಚದೊಳ್ ಪ್ರಥಮ
ಪ್ರಜ್ಞಾನ ನಿಧಿಯೆನಿಸಿ ತೊಳಗಿ ಬೆಳಗಿದ ಸೀಮಾ
ಪುರುಷ ಧೃವತಾರೆ ಸರ್ ಜಗದೀಶ್‌ಚಂದ್ರ ಬೋಸ್ !
ಅಂದು, ಬಡಬಾನಲದಲಿ ಸಿಲ್ಕಿ ನರಳುತ ವಿಶ್ವ
ವಿಖ್ಯಾತಿ ಪಡೆಯೆ ಪಟ್ಟ ಪಾಡು ಅಲ್ಪವಲ್ಲವೈ.
ಮಹತ್ತರ ವಿಜ್ಞಾನ ಪ್ರಯೋಗಗಳಂ ಗೈದು
ಪರಮ ಕ್ರಾಂತಿಕಾರೀ ಪ್ರಗತಿ ಸಾಧಿಸಿ ಲೋಕ
ವಿಜ್ಞಾನ ಪ್ರಜ್ಞೆಯನಿತ್ತು ಹರಿಸಿದ ಪ್ರಖ್ಯಾತ
ವ್ಯಕ್ತಿ ಭಾರತಮಾತೆಯ ವರ ಜ್ಯೇಷ್ಠ ಪುತ್ರ ಕಣ !

ಅಂದು ಆಂಗ್ಲರಾಳ್ವಿಕೆಯಲಿ ಭಾರತೀಯರ
ಸ್ಥಾನಮಾನ ಕಸಕ್ಕಿಂತ ಕಡೆಯಿರೆ ತಿರಸ್ಕಾರ
ಮೇಣ್ ತುಚ್ಛೀಕರಣಗಳಿಂ ಮೂಲೆಗುಂಪಾಗಿ
ನಲುಗಿ ಕ್ರಿಮಿಕೀಟಗಳವೊಲ್ ಸಗ್ಗಕೆ ಸಲ್ಲುವ
ನರರ್ಗೆಲ್ಲಿ ವಿಜ್ಞಾನ ಕ್ಷೇತ್ರದಲಿ ನಿಜ ಸ್ಥಾನ ?
ಏಗಳುಂ ಆತ್ಮಶ್ರೀವಿದೂರರ ಆಳ್ವಿಕೆಯ
ಇಕ್ಕಳದಲಿ ಸಿಲ್ಕಿ ತೊಳಲಿದೊಡಂ ಎದೆಗೆಡದೆ
ಮುಂದೈದ ವಿಜ್ಞಾನಿ ಜಗದೀಶ ಚಂದ್ರ ಬೋಸ್ !
ಸುಕುಟುಂಬ ವ್ಯಾಪೀ ಬಡತನಮಿರೆ ವಿಜ್ಞಾನ
ಪ್ರಯೋಗಗಳಂ ಪ್ರಕಾಶಿಸೆ ಬರಿಗೈಲಿ ಸಾಧ್ಯವೆ ?
ಆ ಬವಣೆ ಸಾಮಾನ್ಯಮಲ್ತು, ಪ್ರಜ್ಞಾದಮಂ
ತ್ರಿಲೋಕದರಿಕೆಗೆ ತರುವೊಡೆ ಹಣಮಿರದೆಂತೈ ?
ಮಿನ್ನೆ ಸ್ವಾನುಭವ ಘನಿಸಿದ ಮಹಾನುಭಾವರ್
"ದುಡ್ಡೆ ದೊಡ್ಡಪ್ಪ" ಎಂದರೈ ಮುಕ್ತ ಕಂಠದಿಂ. →

ಅಕ್ಷರಶಃ ಜಗದರಿಕೆಯಲಿರುವಾ ನುಡಿಗಟ್ಟು
ಎನಿತೊಂದು ಸತ್ವಯುಕ್ತ ನೆನೆ ಮನವೆ! ದೇಶೀಯ
ರಾಜಕೀಯ ಜಂಜಡದಿಂ ದಯಾ ದಾರಿದ್ರ್ಯ
ಆರ್ಥಿಕ ದಾರಿದ್ರ್ಯಗಳ ಬಿಗಿಗಟ್ಟು ಘನಿಸಿದುದು
ದಿನದಿನಂ ವಿಜ್ಞಾನ ಜ್ಞಾನ ಪ್ರಕಾಶನೆಗೆ
ಅವಕಾಶ ದೊರೆಯದೆ ಚಡಪಡಿಸುತಿರೆ ಮನದಲಿ
ಆತ್ಮೀಯ ಗೆಣೆಯರ್ ನೆರವಿಗೆ ಮುಂಬರೆ ಬಡದೇಶದ
ಆರ್ಥಿಕ ಮುಗ್ಗಟ್ಟು ಸಾಮಾನ್ಯಮೇ? ಕಾಸು
ಕಾಸಿಗೆ ಫರದಾಡಿ ಬಲು ಸಂಕಷ್ಟದಿಂ ದ್ರವ್ಯ
ಗಳಿಸಿ ಸತ್ ವಿಜ್ಞಾನ ಪ್ರಯೋಗಗಳನು ಜಗದ
ಬೆಳಕಿಗಿತ್ತರ್. ಆ ಗೆಳೆಯರೊಡಂ ಮುಂಗೆತ್ತ
ಭಾರತ ಜನನಿಯ ಮಾನಸ ಪುತ್ರಿ ನಿವೇದಿತ
ಮೊದಲಿಗಳೆನೆ ಪೆರ್ಮೆಯಲಿ ಘನಿಸುವುದೆಮ ಮನಂ.
ಸಿರಿತನದಿ ಪಡಿಮೂಡಿದ ಭಗಿನಿ ಬಡದೇಶದ
ಬಡತನಂ ಆತ್ಮಶಃ ಮೈಗೊಂಡ ಯೋಗಿನಿ!
ಸಾಹಸವನು ಪರಮ ಸಾಹಸಗೊಳಿಸಿದ ಅನನ್ಯ
ಅನುಪಮ ನಾರೀಶ್ರೀ ಸಿಸ್ಟರ್ ನಿವೇದಿತ!

ಜಗದೀಶರ ವಿಜ್ಞಾನ ಪ್ರಕಾಶನ ಜಗಮರಿಯೆ
ಏಂವೇಳ್ವೆನೊ ಒದವಿದ ಪ್ರಶಸ್ತಿಗಳ ಸುರಿಮಳೆ!
ಆಗಳ್, ಆಂಗ್ಲ ಸರಕಾರ "ನೈಟ್" ಪದವಿಯಿತ್ತು
ಗೌರವಿಸಿತು ವಿಜ್ಞಾನಿಯ ಜಾನಬಲವನೊಪ್ಪಿ.
ಭಾರತೀಯ ವಿಜ್ಞಾನ ಲೋಕದಲಿ ಸುಜ್ಞಾನಿ
ಜಗದೀಶ ಚಂದ್ರ ಬೋಸರ ನಾಮ ಚಿರ ಕಣ!

—o—

# ಆಲ್ಪ್ಸ ಗಿರಿರಾಜ

ಭಗವನ್ ! ತವ ಸೃಷ್ಟಿಯೀ ಬೃಹತ್ ಬ್ರಹ್ಮಾಂಡದಲಿ
ಕಣ್ತುಂಬ ಕಾಂಬ ಪ್ರತಿ ಕಣಕಣಂ ನಿನ್ನಿರುವಂ
ತುಷ್ಟಿಯಿಂ ಪುಷ್ಟಿಯಿಂ ಶಕ್ತಿಯಿಂ ಮೌಲ್ಯದಿಂ
ರಮ್ಯ ಭವ್ಯತೆಯಿಂ ನಿರೂಪಿಸುತಿರ್ಪುಂ. ಎಲ್ಲಿ
ಯಾವೆಡೆಯೊಳ್ ದೃಷ್ಟಿಯನಟ್ಟದೊಡಲ್ಲಿ ನೀನಿಹೆ
ಸೃಷ್ಟಿಯೈ ಸಿರಿಯೆ ತಾನೈಸಿ!
ಅಹಃ ಎನಿತೆನಿತು
ಜಾನಿಸಿದೊಡಂ ನಿನ್ನಿರುವನರಿವುದು ನರರ್ಗೆ
ಕಡುಕಷ್ಟಮೆನೆ ಪ್ರಕೃತಿಪೂಜೆಯೀ ವರಪೂಜೆ
ಮೇಣ್ ಶಕ್ತಿಪೂಜೆಯಲ್ಲದೇನಲ್ಲಮೊ ಬಂಧು !

ದೂರದೂರದಾ ಪಾಶ್ಚಿಮಾತ್ಯ ಪ್ರದೇಶದೊಳ್
ಸ್ವಿಡ್ಜರ್ಲೆಂಡಿನಲಿ ಪಡಿನಿಂದ ಆಲ್ಪ್ಸ ಪರ್ವತದ
ಪದತಲದಿ ನಿಂದು ತಲೆಯೆತ್ತಿ ನೋಡಲ್, ಓಮೊ !
ಏಂ ದಿವ್ಯದರ್ಶನಂ ! ಏಂ ಕಲ್ಪವೃಕ್ಷ ನೇರಂ ?
ಗಗನ ಚುಂಬೀ ಮಂಜುಮಯೀ ಬೃಹತ್ ದೇಹಿ
ಪರ್ವತೇಶ ನೀನಲ್ಲದಾರಯ್ಯ ಪ್ರಭುವೇ !
ನೋಳ್ಪ ರಸದೃಷ್ಟಿ ಘನಿಸಲೆಲ್ಲಂ ಬ್ರಹ್ಮಮಯಂ !
ಬ್ರಹ್ಮಸತ್ಯಂ ! ಮೇಣ್ ಬ್ರಹ್ಮ ಸಾಕ್ಷಾತ್ಕಾರಂ !
ಕಣ್ದಣಿಯೆ ಮನದಣಿಯೆ ಪರಿಭಾವಿಸುತಿರಲ್
ಪುಣ್ಯಶಿಖರ ದೇಶಂ ಪೊಂಬಿಸಿಲ ಲೇಪದಿಂ
ಮಂಜು ಪೊಳೆಪೊಳೆಯುತಿರೆ ಥಳಥಳಿಸಿ ವರ ರಜತ
ಕಿರೀಟವ ತೊಟ್ಟ ದೇವ ದೇವನೆನಲ್ ನಿಚ್ಚಂ
ಸತ್ಯ ಸುಂದರಂ ! ಜಗದೊಳ್ ಭವ್ಯ ಬಂಧುರಂ ! →

ಮಹಾ ಪರ್ವತ ದೇಶದ ಮೈಯ್ಯ ಹಸುರಿನ ಪುಲ್
ಹಾಸಿನಲಿ ಚಿಣ್ಣಚಿಣ್ಣ ಗಿಡುಗಳ್ ಮುಂಬೆಳೆದು
ನಲ್ಪೂವಿನ ಹಿಲಾಲುಗಳ ಪೊತ್ತು ಬಲ್ಮೆಯಿಂ
ತಲೆದೂಗುತಿರೆ ವರ್ಣವರ್ಣಾಂತ ಸೌಂದರ್ಯ
ಲೋಕಮಂ ನಿನ್ನಲಿ ಭಾವಿಸಿ ನೋಡೆಲೆ ಮನವೇ !
ಏಂ ಶೀತಲಾತಿಶೀತಲಂ ವಾತಾವರಣ
ವರ್ತುಲಂ! ಬೆಚ್ಚನ್ನ ಎಳೆವಿಸಿಲ್ ಇರ್ದೊಡಂ
ಮೈ ಗಡ ಗಡ ನಡುಗಿಪೊಲ್ ಶೀಡುತಿಹ ತಂಗಾಳಿ !

ಅಹ, ಏನನೆಂಬೆ ನಿನ್ನ ಅದ್ಭುತ ಜೀವನಂ !
ಮೇಣ್ ವರ ಕಾರ್ಯಕಾರಣಕಾರೀ ಸುಂದರಂ
ತ್ರಿಲೋಕ ಬಂಧುರಂ! ಸಿತ್ಯಂ ದರ್ಶನೀಯಂ !
ಪರ್ವತ ಪದತಲದ ಕಛೇರಿಯಲಿ ಪ್ರವೇಶೀ
ಪತ್ರಂ ಪಡೆದೊಡೆ ಯಂತ್ರಸಜ್ಜಿತ ವಾಹಕಂ
ಶಿಖರದೇಶಕೆ ಸರ್ರನೆ ಕೊಂಡೊಯ್ಯುವೈ ಅರೆ
ತಾಸಿನೊಳ್ ಸುಲೀಲಾ ಜಾಲದಲಿ! ನೆನೆನೆನೆಯೋ
ಆ ಮಹಾ ಯಾತ್ರೆಯಾನೋದದಾನಂದಂ !
ಇರ್ದುವಲ್ಲಲ್ಲಿ ವಿರಳ ಗಿಡುಮರಗಳ್ ಹಸಿರು
ಚೆಲ್ಲಿ. ಶೀತ ವಾತಾವರಣದಿಂ ಪಕ್ಷಿಲೋಕ
ಎಲ್ಲಿಯುಂ ಕಣ್ಗೆ ಕಂಡುದಿಲ್ಲಂ.

ವಾಹಕಂ

ಏರುತಿರೆ ಬೀಸುಗಾಳಿಯನು ಸೀಳುವಂದದಿ
ಏಂ ಸರಸ ಸಂವಿಧಾನ ಸಂಯೋಜನಾ ತಂತ್ರ !
ಪದತಲದಿಂ ಪರಿದಿವೆ ಅಂಕುಡೊಂಕಿನ ಟಾರು
ಬಳಿದ ಕರ್ರನೆಯ ಚರಣರೇಖಾ ನಲ್ಪಥಂ
ಮೇಣ್ ವಾಹನಂ ಪರಿವ ಹೆದ್ದಾರಿಯುಂ ಜೊತೆ
ಜೊತೆಯಾಗಿ ಸ್ಪರ್ಧೆಗೆತ್ತುವೊಲ್ ಶಿಖರದೇಶಕೆ! →

ಧೈರ್ಯದಿಂ ಶ್ರಮನಿಷ್ಠೆಯಿಂ ಸಾಸದಿಂ ಆಲ್ಪ್ಸ
ಪರ್ವತ ಶಿಖರವನೇರ್ದ ಪ್ರಥಮ ಸಾಸಿಗರ
ನೆನೆ ಮನವೆ! ಇಂದು ಯಾನಕ್ಕೈಗೂಡಿರೆ ಸೊಗವಿರ್ಕ್ಕು.
ಅಂದಿನ ಪರಿಪಾಡಂ ಜಾನಿಸೆ ಮೈ ನಡುಗುಗುಂ!
ಪ್ರಸ್ತುತ, ಕರ್ಬುನದ ಮಹಾ ಹುರಿಯಲಿ ಪರಿಯುವ
ಊರ್ಧ್ವಗಾಮೀಯಯಾನ ಸ್ವರ್ಗಾಭಿಮುಖಿಯೊ ಎನೆ
ಮನೋವಾರ್ಧಿರಂಜಿತಂ! ಮೃದು ಮಂಜುದೆರೆಯಲಿ
ಸುಸುಳಿ ಬರುವ ಕೋಮಲ ರವಿಕಿರಣ ಸಾಂದ್ರತೆಯು
ಮಧ್ಯೆ ಮಾನವನ ಮನಃಮತಿಗಳ್ ಮಸೆದು ಮಸೆದು
ಪೊಂಪುಳಿವೋಗಿ ತಾಂ ತನನತಾನ! ತಂದಾನತಾನ!

ದೇಶದೇಶದಿಂ ಸಂಯಾತ್ರಿಗಳ್ ಬರುತಿರಲ್
ದಂಡು ದಂಡೈಸಿ ಅತುಲ ಶ್ರದ್ಧೆಯಿಂ ನಲ್ಮೆಯಿಂ
ಮುಂದೆಯ್ದು ಉಪಚರಿಸುವುದೈ ಅತಿಥೇಯ ಚಿರ
ರುಚಿರ ಖಾನಾವಳಿ! ಶಿಖರದಲಿ ಜನಜಂಗುಳಿ
ಅಡ್ಲಾಡಿ ದೃಶ್ಯಮಾನ ಸೌಂದರ್ಯಮಂ ರಸ
ಮೀಂಟುವೊಲ್ ಈಂಟೆ ಆಮೋದದಿಂ ನಲಿಯುತಿರೆ
ಬೆಚ್ಚನ್ನ ಉಣಿಸಂ ಮೊಗೆದಿಕ್ಕುತ ಶ್ರಾಂತಿಯಂ
ಕಳೆವುದೈ ನಿಜ ಬಾಂಧವರ ಮಾಳ್ಕೆಯಲಿ! ಮತ್ತಂ
ಶಿಖರವಿಳಿಯಲ್ಕಾ ಜನವಾಹಕ ತಾನಿರ್ಪುದು
ಸಜ್ಜಿನಿಂದೆಲ್ಲ ಗಳಿಗೆಯಲಿ. ಏಗಳುಂ ಎಣೆ
ಯಿಲ್ಲದೊಲ್ ನಡೆವುದೈ ಆರೋಹಣ-ಅವರೋಹಣ.

ಆ ಅನನ್ಯ ಶೀತಲ ವಾತವ ಭರಿಸಲಾಗದೆ
ಗಡಗಡ ನಡುಗುತಿಹ ಯಾತ್ರಿಕರಿಂಗೆ ಬೆಚ್ಚನೆಯ
ನಿಲುವಂಗಿಯನೀವರ್ ಪ್ರವೇಶಿ ಪತ್ರದೊಡಂ
ನಿಮ್ನೋನ್ನತ ಪ್ರದೇಶದ ಏಳೇಳು ಹಂತವ
ಏರುತ್ತೇರುತ್ತಿರಲ್ ಮುಂದೆರಡು ನಿಲ್ಕನೆಯಂ →

ಬೊಕ್ಕು ಪ್ರವೇಶೀ ಪತ್ರ ಪರಿಶೀಲಿಸಿದ ಬಳಿಕ
ಮುಂಪಯಣದ ಸಂಯೋಜನೆ. ಅಹಾ! ಪದತಲದ
ಮೇಣ್ ಪರಿಸರದ ಸಂದರ್ಶನೀಯವಾದ ಪ್ರಕೃತಿ
ಸೌಂದರ್ಯವನೇನೆಂಬೆನೊ, ನೋನೋಡುತಿರೆ
ಮೈ ಮರವಟ್ಟುದೊ ಮನಮರವಟ್ಟುದೊ ಎನಲ್ಕೆ
ಮನಃಚಿತ್ತ ಮಂತ್ರ ಮುಗ್ಧದುಗ್ಧಂ.

ಭಗವನ್ !

ತವ ಮೈಸಿರಿ ಪ್ರಕೃತಿ ವಿಶೇಷವೆಂದು ಭಾವಿಸೆ
ಉಜ್ವಲ ವದನ ಬಿಂಬ ಪ್ರತ್ಯಕ್ಷ ರವಿಯಲ್ತೆ ?
ನೀಲನೀಲಾಕಾಶ ತವ ಚಿಕುರ ರಾಶಿಯೆನೆ
ಸಾಜಂ. ತವ ಸ್ವರೂಪ ದರ್ಶನದಿಂ ಮನವೆರ್ಚಿ
ಮೈವೆರ್ಚಿ ಮುದಗೊಂಡು ಸಿರಿ ಸಂಗದ ಸರಸದಲಿ
ಮನಃಪ್ರಾಣ ರಾಗಾನುರಾಗದ ಮೋದದಿಂ
ನಲಿಯುತಿರೆ ಸಗ್ಗ ಶ್ರೀವಿಹಾರಂ ಕೊನೆಗೊಂಡು
ಜನವಾಹಕವೇರೆ ಚಣದಲಿ ನಿಷ್ಕ್ರಮಣ ಯಾತ್ರೆ
ತಾನಾದುದು ಮನಮೋಹಕತೆಯಲಿ !

ಅಃ ! ಮೇಲೆ

ಗಗನತಲ ; ಕೆಳಗೆ ಪಚ್ಚ ಪಸುರ್ವೆತ್ತ ಭೂತಲ.
ಅಲ್ಲಲ್ಲಿ ಮೈಯೊಡೆದಿಹ ಉನ್ನತೋನ್ನತ ಸಿರಿ
ಸೊಬಗುಗುವ ಹರ್ಮ್ಯಗಳ ಮೇಣ್ ಮುಂಬಿನಾ ಕಿರು
ದೋಂಟಗಳ ವನಸಿರಿ ರಸದೃಷ್ಟಿಗೌತಣಂ ! ಮೇಣ್
ವಿರಳ ಪಶು ವೃಂದಂ ಮರಿಯಾನೆಯ ಮೀರುವೊಲ್
ದಟ್ಟಪುಷ್ಟಂ ; ಪರಿಪುಷ್ಟಂ ; ನೋಳ್ಪ ಕಣ್ ತಣಿವೊಲ್
ಹರ್ಷದಾಯಕಂ ! ಮೂರನೆಯ ನಿಲ್ಮನೆಯೊಳ್
ವಾಹಕದಿಂದಿಳಿದಾವು ಹಿಡಿಯೆ ಕಾಲ್ಪಥಮಂ
ನಡೆಯುತ್ತೈತರುವ ಹುಮ್ಮನ ಹರ್ಷ ಉಕ್ಕುಕ್ಕಿ.

→

ಪರ್ವತ ಪದತಲಕೆ ಗಲ್ ಗಲ್ಲೆನಲ್ ಮುಂದಿಡೆ
ಪಜ್ಜೆ ಪಜ್ಜೆಯುಂ ಏನಾನಂದವೊ ಈ ಜಗ
ಹೃದಯಂ! ಸಂಭ್ರಮ ಸಡಗರಗಳ ಒಕ್ಕೂಟಂ!
ಪಾದವಂ ಮುದ್ದಿಸುವ ಪುಲ್ಹಾಸಿನ ಹಸುರಿನ
ರನ್ನಗಂಬಳಿಯು ಸುಖ ಸ್ಪರ್ಶಂ ಮನೋದದಿಯು
ರಸ ಚೇತನೆಗೆ ಪರಮ ಚಿತ್ತೆನೆ ರಾಗಾಖುಣ
ತಾನವುಕ್ಕಿ ಕವಿ ಕಾವ್ಯ ಕಲ್ಪನೆಗೆ ವರ ಕಣ!

—o—

## ವಸಂತ ಕೋಗಿಲೆ

ವಸಂತ ಮಹಾ ಪ್ರಭುವಿನ ಒಡ್ಡೋಲಗದೊಳ್
ದಿನದಿನಂ ಕಮನೀಯ ಕಂಠದಲಿ
ಹಾಡುತ ಜಗವಂ ಬೆಮೆಗೊಳಿಪ ವರ ಕೋಗಿಲೆಯೆ!
ನಾಕದಿಂ ಬಂದವೊಲ್ ಸಂಗೀತ
ಕೋವಿದನೆನೆ ಸಡಗರದಿಂ ಪಾಡಿ ನಲಿದಾಡಿ
ನೊಂದೆನ್ನ ಮನಕೆ ಮುದವ ತುಂಬುವ ಕೋಗಿಲೆಯೆ!
ಪಾಡೈ ವಸಂತ ಕೋಗಿಲೆಯೆ! ಕೇಳುತ ನಾ ನಲಿವೆ
ಮನದ ಕಡು ದುಃಖವನು ಬದಿಗೊತ್ತಿ
ಜೀವನದಲಿ ದೊರೆಯದ ಮನಃಶಾಂತಿ ಪಡೆದಪೆಂ
ನಿನ್ನಯ ಮಧುರ ಕಂಠಗಾನದಲಿ
ನೀನಹುದು ಎನ್ನಯ ಪರಮ ಮಿತ್ರ ಎಂದಪೆನೊ
ಮನಮುಟ್ಟೆ ನುಡಿಸೆಲ್ಲೈ ಓ ರಾಗ ಕೋವಿದನೆ!

—o—

# ಸ್ವಾತಂತ್ರ್ಯಯೋಧ ವೀರ ಸಾವರ್ಕರ್

ಕ್ರಾಂತಿಕಾರಿ ಮಹಾಪುರುಷ, ಸ್ವತಂತ್ರ್ಯಯೋಧ
ವೀರ ಸಾವರ್ಕರ್ ಮಹೋದಯರ ಪುಣ್ಯನಾಮ
ಎಂದೆಂದಿಗೂ ಅಚ್ಚಳಿಯದಿಹ ಸತ್ ಕೀರ್ತಿಶಿಖರ!
ಭಾರತ ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮದಾ
ಇತಿಹಾಸ ಪುಟದಲಿ ಸುವರ್ಣಾಕ್ಷರಗಳಿಂದೆ
ಬರೆದಿಡುವನಿತು ಮಹಾನ್ ಸಾಹಸ ಜೀವನಂ!
ಬಾಲ್ಯದಿಂ ವೀರಾತಿವೀರರ ಚರಿತ್ರೆಯಂ
ಕೇಳಿ ಕೇಳಿ ಮನಗೊಂಡು ದಮನಿ ದಮನಿಗಳಲಿ
ಬಿಸಿ ನೆತ್ತರಂ ಕುದಿಸಿ ಕುದಿಸಿ ವೀರತನಮಂ
ಮೈಮನಂಗೂಡಿಸಿ ಭಾರತೀಯರ ಶೃಂಖಲಾ
ಬದ್ಧ ಜೀವನದ ನರಕಯಾತನೆಯಂ ಜಡಿದು
ಕುಟ್ಟಿ ಪೋಗಾಡೆ ಪಗಲಿರುಳ್ ಶ್ರಮವಂ ಇನಿತು
ಲೆಕ್ಕಿಸದೆ ಬ್ರಿಟಿಷರ ಎದುರ್ವೆತ್ತು ಕೇಸರಿಯೋಲ್
ಹೋರಾಡಿ ಸೆರೆಗೆ ಸಂದ ಮಹಾನ್ ರಣವೀರ!
ಅಂಡಮಾನ್ ದ್ವೀಪದ ಘೋರಾತಿಘೋರ ಸೆರೆ
ಮನೆಯಲಿ ನರಕವಾಸ ಅನುಭವಿಸಿ ಜೀವನದ
ಬಹು ಮೌಲ್ಯಮಂ ತೆತ್ತು, ದೀನ ಭಾರತ ಜನನಿಯ
ಋಣ ತೀರಿಸಲ್ ಪ್ರಾಣವನ್ನೆ ಪಣವಿಟ್ಟ ವರ
ಮನೀಷಿ!

ಅಂದು ಯುವ ಜನರ್ಗಿತ್ತ ಸಂದೇಶವಿದು
"ಪರಮ ಬಂಧುಗಳೇ, ಈಗಳ್ ನಿಮ್ಮ ಲೇಖನಿ
ಬದಿಗಿಟ್ಟು ಖಡ್ಗ ಪಿಡಿವಕಾಲ ಒದವಿದೆ! ಮನ
ಗೆಡದೆ ಸುಡುಗೋಲಿಗೆ ಎದೆಯೊಡ್ಡಿ! ಅಷ್ಟೇಕೆ ನೀವ್

→

ಕೋವಿ ಹಿಡಿದು ಒಗೆಯಿರಿ ಸುಡುಗೋಲಿಗಳಂ! ಬಿಳಿ
ಧೂರ್ತರ್ ಬೆದರಿ ಬಾಲ ಮುದುಡಿ ನಮ್ಮಾ ಪುಣ್ಯ
ಭೂಮಿಯಂ ಬಿಟ್ಟೋಡುವನಕ ಹಿಂದೆಗೆಯದಿರಿ!
ಎಚ್ಚರೆಚ್ಚರ! ಧೈರ್ಯಂ ಸರ್ವತ್ರ ಸಾಧನಂ!"
ಸಾವರ್ಕರ್ ಸ್ವಾತಂತ್ರ್ಯ ಯೋಧ ಮಾತ್ರವಲ್ತು,
ಮಹಾಸಾಗರವನೀಜಿ ದಾಂಟಿದ ಅನುಪಮ ಶೂರ!
ಸಮಾಜ ಸುಧಾರಕ! ಅಪ್ರತಿಮ ವಾಗ್ಮಿ! ಕವಿ ಕಾವ್ಯ
ಅಮೂಲ್ಯ ಅನನ್ಯ ಸಾಹಿತ್ಯ ರಚನಾಕಾರ!
"ದಿ ಫಸ್ಟ್ ವಾರ್ ಆಫ್ ಇಂಡಿಪೆನ್ಡೆನ್ಸ್" ಎಂಬ
ಅವರ ಬೃಹತ್ ಗ್ರಂಥ ರಾಷ್ಟ್ರೀಯ ಸಾಹಿತ್ಯದ
ಶ್ರೀ ಭಂಡಾರಕೆ ಪರಮ ಕಾಣಿಕೆ ಎನೆ ಸಾವರ್ಕರ್
ನಾಮಧೇಯ ಭಾರತ ಇತಿಹಾಸ ಇರುವನ್ನ
ಸುವರ್ಣಾಕ್ಷರಗಳಲ್ಲಿ ತೊಳಗಿ ಬೆಳಗುವ ಉಲ್ಕೆ!
ಪ್ರಜ್ಞಾನ ಮೇಧಾವಿ! ಪರಮೇತಿಹಾಸಜ್ಞ!
ಇಂತೆಲ್ಲ ಕ್ಷೇತ್ರಗಳಲೂ ವೀರ ಸಾವರ್ಕರ್
ಗೈದ ಸಾಹಸ ಅತ್ಯದ್ಭುತ ಪರ್ವತಾಕಾರ!
ಮತ್ತಮನದ ಕವಿಕೋಗಿಲೆಯ ಮಧುರ ಕಂಠದ
ರಾಗಾಲಾಪನೆಗೆ ಬಿತ್ತು ಕಣ ಕೀರ್ತಿ ಕತ್ತರಿ!



# ಕಾಲವಾಹಿನಿ

ಕಾಲವಾಹಿನಿಯ ಮಹತ್ ಪ್ರಭಾವ
ಪಜ್ಜೆ ಪಜ್ಜೆಯೊಳ್ ಎಡೆವಿಡದವೊಲ್
ಜಗದೆದೆಯ ಬಾಗಿಲಂ ತಟ್ಟುತಿರೆ
ಅರಿದುದೇಂ ಜನಮತಿ ಮಹಾ ಕಾಲನಂ ?
ಚಣಂ ನಿಲ್ಲದೆ ಪರಿವ ಗತಿಯುಣಂ
ಪ್ರಜ್ಞಾಲಹರಿ ಎನದಿರಲುಂಟೆ ?
ಪ್ರಪ್ರಸಿದ್ಧ ಪ್ರಜ್ಞಾನದ ಒಡಲಲಿ
ಬಾಳ್ವಾಮೇ ಸತ್ ಸಮಯ ಪ್ರಜ್ಞೆಯಂ
ಬೆಳೆಸಿಕೊಳ್ಳದಿರೆ ತಪ್ಪು ಆರದೈ ?
ಈಗಲೀಗ–ಈಚಣ–ಈಗಳಿಗೆ
ಎನುವುದರಲಿ ಭೂತ–ವರ್ತಮಾನ
ಭವಿಷ್ಯಗಳ್ ಹೇಳ ಹೆಸರಿಲ್ಲದೊಲು
ಮಿಂಚಿ ಹೋಹುದಲಾ ಧೂರ್ತಗತಿಯುಲಿ !
ಆದಿ ಅಂತ್ಯವಿಲ್ಲದ ಕಾಲದಲಿ
ಒರ್ ಚಣಂ ಬದುಕಿರ್ದೊಡೆ ಅನಂತ
ಕಾಲದಲಿ ಬದುಕಿದೊಲ್ ಎಂಬರೋ
ಧೀಮಂತರ್ ! ಕಾಲಂ ಅನಂತಂ !
ಕಾಲಂ ಪರಮ ಸತ್ಯ ಸಂಪದಂ !
ಕಳೆದ ಕಾಲವು ಮತ್ತೆ ಬಹುದೇಂ
ಕಾಡಿ ಬೇಡಿದೊಡೆ ? ಎಂದಾದೊಡಂ
ಗೈವೆನೆಂಬ ವಿಳಂಬಗತಿಗುತ್ತರಂ
ಕಾಲದ್ರವ್ಯದ ಅದ್ಭುತ ನಷ್ಟಂ !
ಅಂದೊಡೆಲ್ಲಿಯ ಕಾಲಸಂಪದಂ
ನಮ್ಮ ಜೋಳಿಗೆಯಲಿ ತಿಳಿದು ನೋಡ !

—o—

## ಮಾಲಿನ್ಯ

ಕಂಡು ಕಂಡು ಅರಿತರಿತು ನಿಚ್ಚಂ
ಪರಿಸರದ ಮಾಲಿನ್ಯಕೆಡೆಗುಡುವುದೇಂ
  ಮನಃಚಿತ್ತಗಳಿರ್ದ ಮನುಕುಲಂ ?
ಮನೆಯಂಗಳದ ಕೊಳಚೆ, ಕಾರ್ಖಾನೆಯ
  ಕೊಳಚೆ ನೀರಂ ನದಿಗಳಿಗೆ ಹರಿಸುವರೆ?
ಮನೆ ಬಳಕೆಯ ಕೆರೆ ನೀರನು ಸ್ವತಃ
  ಮಲಿನಗೊಳಿಸೆ ಏನಪ್ಪುದು ಪೇಳ್ ?
ರೋಗ–ರೋಗ ಮೂಲವೈ ಮಾಲಿನ್ಯ !
  ತಿಳಿದೂ ತಿಳಿದು ರೋಗ ಕೊಂಬರೇಂ
ಬುದ್ಧಿಯಿದ್ದು ಯೋಚಿಸಬಲ್ಲ ಜನ ?
  ಭಗವಂತ ! ನೀನಲ್ಲದಾರಯ್ಯ
ಈ ನರ ಜಂತುಗಳಂ ಸರಿ ಹಾದಿಗೆ
  ಹಚ್ಚುವರ್ ನೀ ಪರಿಭಾವಿಸಿ ನೋಡೈ !
"ಕೊಡಲಿ ಕಾವು ಬುಡಕ್ಕೆ ಮೂಲ" ಎಂಬ
  ಗಾದೆಯ ನುಡಿಗಟ್ಟು ಎನಿತು ಸಾಜಂ ?
ಕಾಲಾನುಕಾಲದಿಂ ಕೇಳಿಬಹ
  ಚನ್ನುಡಿಯನಿನ್ನುಂ ತಿಳಿಯದೇಕೆ
ಮತಿವಂತ ಚಿಂತನಾಶೀಲ ಜನ ?
  ಏಂ ಲಜ್ಜೆಗೇಡು ! ಏಂ ಬುದ್ಧಿಗೇಡು !

—o—

# Venice City

ಅತ್ಯದ್ಭುತವಲಾ ಅನನ್ಯ ಜ್ಞಾನ-ವಿಜ್ಞಾನ
ಸಂಯೋಜನೆಯುಂ ಸೃಷ್ಟಿಸಿದ **Venice City !**
ಅಹ, ಆಶ್ಚರ್ಯ ಮಾತ್ರಮಲ್ತು ಎಣೆಯಿಲ್ಲದ
ನಿತ್ಯ ಸೌಂದರ್ಯದಿಂ ಜಗದೇಕ ಕೃತಿಯಾಗಿ
ಕಂಗೊಳಿಪುದು ನೋಳ್ಪ ಕಣ್ ತಕ್ಕನೆ ಸುಖಮೂರ್ಛೆ-
ಗೊಳ್ವ ಮಾಳ್ಕೆಯಲಿ ! ಓ, ಅಪೂರ್ವ ನಗರಿ ವೆನಿಸ್ !
ಆ ಮಹತ್ಪೂರ್ಣ ಸಂಯೋಜನೆ-ಅಸಮಾನ್ಯ
ಸಾಮರ್ಥ್ಯ ಸಾಸಗಳಿಂ ಪೊದಳ್ದ ಸಗ್ಗದ
ಪ್ರತೀಕಮೊ ಮೇಣ್ ಸಗ್ಗಮೆ ಧರೆಗಿಳಿತಂದುದೊ
ಎನಲ್ಕೆ ಮೆಡಿಟರೇನಿಯನ್ ವಾರ್ಧಿಯಂಚಿನಲಿ
ನಲ್ದಾಣಮಂ ಹೊಂಚಿ ನಿರ್ಮಿಸಿದ ಸುರನಗರಿ !
ಸುತ್ತಮುತ್ತಣಿಂ ರಪ್ ರಪ್ಪನೆ ಅಪ್ಪಳಿಸುವೊಲ್
ಮನೆಮನೆಯ ಗೋಡೆಗೋಡೆಗಳಂ ಅಲೆ ಅಲೆಗಳ್
ಮುದ್ದಿಡುತಿವೆ ಮೋದದಲಿ ! ಎಂತೀ ನಗರವಿಂ
ಕರಗಿ ನೀರಾಗಿ ಹೋಹದುಳಿದಿದೆಯೊ ಎನಿಸಲ್
ಮನದಲಚ್ಚರಿ ತಾಂ ಘುಮುಘುಮಿಸುತ ನಿಂದತ್ತು !
ಮಿನ್ನೆ ಶತಶತ ಶತಮಾನ ಪೂರ್ವದೊಳ್ ಇಂ
ಮನುಕುಲಂ ಕಣ್ತೆರೆವ ಮುನ್ನಂ ಏನಾ ಜ್ಞಾನ
ನಿಧಿಯೊ ಇಂತಪ್ಪ ಸುರನಗರಿಯಂ ಕುಂದಿಲ್ಲದ
ಮಾಳ್ಕೆಯಲಿ ನಿರ್ಮಿಸುವೊಡೆ. ಆವಾವ ಬಗೆಯ
ಒಕ್ಕೂಟ-ಒಮ್ಮನಗಳ್ ಪರಿಶ್ರಮಿಸಿ ಈ ಪರಿ
ಮಹಾ ಜಲಧಿಯಲಿ ಸರಸವಾಡುವ ಸಾಸಮಂ
ಕೈಕೊಂಡ ಶಕ್ತಿಮತಿ ಆವ ದೈವದತ್ತಮೊ

→

ಪರಮಾತ್ಮ ಮಾತ್ರ ಬಲ್ಲಂ ಮೆನ್ನದೆ ಬೇರೇಂ
ತೋರದು. ಬರಿದೆ ಮಾತಿಲ್ಲಿ ನಿಷ್ಪ್ರಯೋಜನಂ!
ತ್ರಿಲೋಕ ಬೆಡಗಿನ ನಗರಮಂ ನಿರ್ಮಿಸಿ ಸುಮಂತ್ರ
ಮಾಯದಾಟಂ ಗೆಯ್ದಿಹರ್ ಪರಮ ಶ್ರದ್ಧೆಯಿಂ!

ಅಹ, ಏಂ ಮನುಜಕೃತ ಅನನ್ಯ ಅನುಪಮ ಭವ್ಯ
ಪವಾಡದ ವಾರಾಶಿ! ಪ್ರಕೃತಿಯ ಮಹತ್ತರ
ಶಕ್ತಿಯ ವಿಶೇಷಕೆ ಹೆಗಲೆಣೆಯಾದುದೊ ಎನಲ್
ಮನುಶಕ್ತಿ ಲೋಕಪ್ರಸಿದ್ಧವೈ ಇಟಲಿ ದೇಶದ
ವೆನಿಸ್ ನಗರಿ ಕಟ್ಟೆ! ಪ್ರತಿ ಹರ್ಮ್ಯದ ತಳಪಾಯಂ
ಜಲರಾಶಿಯಲಿ ಮುಳುಂಗಿ ಸ್ವಸ್ಥಮಿರೆ ಶೋಣಿತ
ಶೈಲಿಯ ಶಿಲಾ ಪೀಠಗಳೊ ಮೇಣ್ ಕೆಮ್ಮನೆಯ
ಪೆರ್ಬಂಡೆಗಳ ವಾರ್ಧಿಯೊ ಮೇಣ್ ಕೆಮ್ಮುಗಿಲ
ಹೇರಾಶಿಯೊ ಎನೆ ಕನಕ ಕಾಂತಿಯ ಕನಕಪುರಿ!
ಮತ್ತದು ಇನ್ನೆಬರಮಿನಿತು ಬಣ್ಣಂ ಮಾಸದೊಲ್,
ಅಂದ ಚೆಂದಂ ಕೆಡದೊಲ್, ಸೌಂದರ್ಯ ನಿಧಿಯಂ
ಪ್ರದರ್ಶನಕಿತ್ತವೊಲ್ ಅಚ್ಚಳಿಯದಿರ್ಪುದೇ
ಅದ್ಭುತ ವಿಶೇಷಂ! ಘನ ಸೌಂದರ್ಯಂ! ಮಹಾ
ಜಲರಾಶಿಯಲಿ ಇಡೀ ನಗರಿಯ ತಳಪಾಯಂ
ಮುಳುಗಿರಲ್ ಸುತ್ತಮುತ್ತಲೆಲ್ಲೆಡೆಯುಂ ನೀರು-
ನೀರು-ನೀರು! ಮನೆಮನೆಯ ಹೊಸ್ತಿಲ್ ಮುದ್ದಿಸುತ
ತೊಳೆಯುವ ಜಲರಾಶಿಯ ಮೊರೆತಮಂ ಕೇಳುತಿರೆ
ತನುಮನಂ ಪುಳಕಿತಂ! ಪ್ರಾಣಂ ಪರಿಭ್ರಮಣ
ಸುಂದರಂ! ಚಿತ್ತಂ ವಿಚಾರಕಲ್ಪ ಬಂಧುರಂ!

ಜ್ಞಾನ ಭಂಡಾರ ಕದಡುವನ್ನೆಗಂ ಯೋಚಿಸು
ಓ, ಮನವೇ! ಪಾಶ್ಚಾತ್ಯ ಭೌದ್ಧಿಕ ಸ್ತರದೊಳ್
ಎಂತಪ್ಪ ಪುಟ್ಟುವಳಿ! ಯಾಂತ್ರಿಕ-ನಿಜ ತಾಂತ್ರಿಕಸ್ತ

ಜ್ಞಾನ ಬಂಢಾರ ಇಂದು ನಿನ್ನೆಯದಲ್ಲವೋ,
ಕಾಲಾನುಕಾಲದಿಂ ರಕ್ತಗತವಾಗಿರ್ದ
ಜ್ಞಾನ ವಿಜ್ಞಾನಂಗಳ್ ಲೀಲಾಜಾಲದಿಂದಲಿ
ಬಂದುದಲ್ಲಂ. ಪರಿಶ್ರಮ ಪರಿಶೋಧನೆಗಳಿಂ;
ಸ್ವಪ್ರಯತ್ನದಿಂ; ಧೈರ್ಯದಿಂ ; ಕಾರ್ಯ
ನಿಷ್ಠೆಯಿಂ; ಸಾಧನಾ ಸಂಯೋಜನೆಯಿಂ ಗುರಿ
ಮುಟ್ಟುವರ್ ಪರಮೋಚ್ಚ ಸಾಸದಲಿ ಮುಂಬರಿದು !
ಓ, ಮಮ ಜೀವನ ಬಂಧು ! ಮಹಾಜಲಧಿಯಲಿ
ಮುಳುಗಿ ಮೆರೆಯುವ ವೆನಿಸ್ ನಗರಿಯಂ ನೋನೋಡಿ
ನಮ್ಮೃತ್ರನ ಜಾಸಿಸಿ ಅರಿಯ್ಯೈ ಕಾರ್ಯಕಾರಣ
ಸಂಯೋಜನೆಯಿಂ ಘನಿಸೆ ದೂರದ ಭವಷ್ಯವಂ!
ಅಹಾ! ಕವಿಮನ ಘನಿಸುವುದು ಹೆಪ್ಪುಗಟ್ಟಿದೊಲ್ !
ಕವಿತಾರಮಣಿ ನಲಿದು ನರ್ತಿಸುತಿರೆ ಹೃದಯ
ರಂಗದಲಿ ತಾಳ-ಲಯ ಛಂದೋಬದ್ಧವಾಗಿ !

—o—

## ಸಾಹಿತ್ಯ

ಬೇಸರ ಪರಿಹರಿಪ ವಿದೂಷಕನ
ಪಾತ್ರ ವಹಿಸುವವನಲ್ಲ ವರಕವಿ !
ಸತ್ ಸಾಹಿತ್ಯ ಲಘು ಮನಸ್ಕರಂ
ನಲಿಸುವ ಧಿಮಿಧಿಮಿ ಕುಣಿತವಲ್ಲವು !
ಗಂಭೀರತರ ವಿಚಾರ ಸಾಹಿತ್ಯ
ನಿತ್ಯ ದರ್ಶನ ಮೂಲವಾದುದೈ
ಕಡಲಾಳ ಮುತ್ತಿನೊಲ್ ಸ್ವಚ್ಛ-
ಶುಭ್ರ ಗಂಧ ಶ್ರೇಷ್ಠ ಕವಿ ಕಾವ್ಯ.
ತಪಸ್ಸರಿಯದ ಕವಿತ್ವ ಕುಕವಿತೆ
ಕಡಲಲೆಯ ಮೇಲಿನ ಬುರುಜು ನೊರೆಯು
ಮಾಳ್ಕೆಯಲಿ ಉಕ್ಕಿಬರೆ ಬೆಲೆಯಿಲ್ಲ
ನೆಲೆಯಿಲ್ಲ ಎನೆ ಬಾಳದು ಬಹುಕಾಲ.

# ಜಿಡ್ಡು ಕೃಷ್ಣಮೂರ್ತಿ

ಇಪ್ಪತ್ತನೆ ಶತಮಾನ ಸಂಜೆಯಲಿ
ಮಿಣ್ಣನೆ ನೇಪಥ್ಯಕೆ ಸಾರಿದ
ಮಹಾ ತತ್ತ್ವಜ್ಞಾನಿ
ಜಿಡ್ಡು ಕೃಷ್ಣಮೂರ್ತಿ ಮಹೋದಯಂ
ಮನು ಕುಲವಂ ನೇರ್ಪಡಿಸೆ
ಸಾರಿ ಸಾರಿ ಹೇಳಿದ ವಿಚಾರಧಾರೆ
ಲೋಕ ಪ್ರಖ್ಯಾತಿ ಕಣ!
ಶತ ಶತಮಾನಗಳ ರಜೋಗುಣ
ಮುಂಬೆಳೆದು ಪ್ರಜ್ಞಾನ ರಾಶಿಯನು
ಮುಚ್ಚಿ ಹೊಸಕುತಿರೆ
ನೋನೋಡಿ ಮನ ಮರುಗಿ ಕರಗಿ
ಜೀವನೀಯ ಕಲೆಯನು ಉಳಿಸಿ
ಸಂಭಾಳಿಸೆ ಸಿಡಿದೆದ್ದು
ಮತಿ ಖಡ್ಗವ ಮಸೆದು ಝಳಪಿಸಿ
ಶಾಸ್ತ್ರಗೀಸ್ತ್ರದ ವಿಪಿನ ವ್ರಾತವನು
ಕಪಟ–ಮೋಸ–ಅನೀತಿ–ಅನ್ಯಾಯ
ಮುಂತಪ್ಪ ಕಂಟಕ ಗುಲ್ಮಂಗಳನು
ಛೇಡಿಸಿ ಛೇಡಿಸಿ
ಶಾಸ್ತ್ರೀಯ ಬೇರುಗಳನು
ಸಮೂಲವಾಗಿ ಅಲುಗಾಡಿಸಿ
ಪಾಂಚಜನ್ಯವಂ ಊದಿ
ಕ್ರಾಂತಿ ಮಂತ್ರವಂ ಲೋಕಕೆ ಬಿತ್ತಿ
ಬದುಕಿಗೆ ಶಾಶ್ವತವನಾರೈದು



ನಿಚ್ಚ ಸತ್ಯಂ-ಶಿವಂ-ಸುಂದರಂ
ಸಚ್ಚಿದಾನಂದ ಬಂಧುರಂ
ಎಂದೆಂಬ ಘನತರ
ಅನುಭವಂ ಹೃದಯದೊಡ್ಡೋಲಗದಲಿ
ಒಲೈಸಿರೆ ಧರ್ಮಕರ್ಮಸಾರ
ತನನ ತೋಂತನನ
ರಂಗಣ ರಿಂಗಣ ನೃತ್ಯ
ಜಗಕೆ ಅತೀವ ಶಾಂತಿ ಮಂತ್ರ
ಓಂ ಶಾಂತಿ ಶಾಂತಿ ಶಾಂತಿಃ
ಸ್ಮೃತಿ, ಚಿಂತನೆ, ಜ್ಞಾನಗಳ್
ಭೂತಕಾಲೀನ ಸಂಚಿತ ಅನುಭವವಿರೆ
ಅದರ ನೆರವಿನಿಂ ವರ್ತಮಾನ ಭವಿಷ್ಯಗಳ
ಸಮಸ್ಯೆಗಳಂ ತುಲನೆಗೈವುದು
ಸಹಜವೆಂದೊಡಂ ಈ ದ್ವಂದ್ವ ವಿಚಾರವೆ
ಜೀವನೀಯ ಅವ್ಯವಸ್ಥೆಗೆ ಕಾರಣಂ.
ಎಲ್ಲಾ ಕಲೆಗಳ ತಾಯಿ ಜೀವನ ಕಲೆ.
ಇದರ ಮಹತ್ತಂ ಅರಿಯುವೊಡೆ
ಅಗಾಧವಾದ ಚಿಂತನೆ-ಪ್ರಾಮಾಣಿಕತೆ
ಜಾಣತನಗಳ ಸುಸಂಸ್ಕಾರವಿರಲಕ್ಕು.
ಇಂದು ಮನುಕುಲಕೋಟಿ
ಕೊಚ್ಚೆಯಲ್ಲಿನ ಕ್ರಿಮಿ ಕೀಟಗಳವೊಲ್
ಹುಟ್ಟಿ ಸಂದು ಹೋದರೇನು ಭಾಗ್ಯ ?
ಜೀವನ ಕಲೆಯಂತೆಯೇ
ಮಾತುಗಾರಿಕೆಯೂ ಇನ್ನೊಂದು ಲಲಿತ ಕಲೆ.
ವೇದಾಂತ-ತತ್ತ್ವಜ್ಞಾನ-ದೇವರುಗಳ ಮೊಳಗು
ಸೊಗಸು ಮಾತುಗಾರಿಕೆಯಿಂದೆ.

→

ಅನಂತರ ಬಿಳಿಯ ಪುಟದ ಮೇಲೆ
ಕರಿಯಕ್ಕರದ ಚಂದನೆ ಸಾಲು.
ಮನ ಮಥಿಸಿ ಮಥಿಸಿ
ಅರಿವು ಮೂಡಿಸುವುದೆ ಜಾಣತನ
ಎಂಬುದೆ ಪ್ರಖ್ಯಾತ ತತ್ತ್ವಜ್ಞಾನಿಯ ಸಂದೇಶಸಾರ.
ಮನುಷ್ಯ ಹೇಗೆ ಇರಲಿ,
ದೈಹಿಕ ರಚನೆ, ಮಾನಸಿಕ ಪ್ರವೃತ್ತಿ
ಮೇಣ್ ಪ್ರಾಣ ಸಂಯೋಜನೆ ಒಂದೇ
ಎನಲ್ಕೆ ಇಡೀ ಮನುಕುಲ ಒಂದೇ
ನನ್ನ ಜಾತಿ, ನನ್ನ ದೇವರು, ನನ್ನ ಧರ್ಮ
ಎಂಬುದು ಕ್ಷುಲ್ಲಕ, ಅವನತಿಯ ಮುಖ.
ಅಹಿಂಸೆಯ ತತ್ತ್ವದಿಂದೆ ಹಿಂಸೆ ಕೊನೆಗಾಣದು.
ಒಳಿತು–ಕೆಡಕುಗಳ ಪ್ರತಿಮೆ
ನಮ್ಮ ಮನದಲಿ ಸೇರಿ ನೋಂದಣಿಯಾಗುವ
ಮುನ್ನವೇ ಅತ್ತ ಗಮನ ಹರಿಸಿದರೆ
ಅವು ನೋಂದಣಿಯಾಗಲಾರವು.
ಮನುಕುಲಕೆ ಮುಖ್ಯ ಭಯ
ಸಾವು..... ಸಾವು..... ಸಾವು !
ಬದುಕಿನ ಹುಮ್ಮಸಿನ ಹಿಂದೆ
ಸಾವಿನ ಪಾಶ ಬೀಸಿರೆ
ಹೆಜ್ಜೆ ಮುಂದಿಡಲು ಭಯ.
ಸಾವು ಅನಿವಾರ್ಯ–ಬದುಕಿನ
ಅವಿಭಾಜ್ಯ–ಸತ್ಯಾಂಶ ಎಂಬ ಅರಿವು
ಯಾರಿಗೆ ಇರದು ?
ಸಾವಿನ ಭಯವಿಲ್ಲದೆ ಬದುಕುವ ಕಲೆ
ನಿಜವಾಗಿಯೂ ಸ್ತುತ್ಯ ಕಲೆ !
ಮಾನಸಿಕ ಪ್ರತಿಕ್ರಿಯೆಗಳನ್ನು ←

ಅಲ್ಲಿಂದಲ್ಲಿ ಅದುಮಿದರೆ ಅವು ಅಲ್ಲಿಯೇ
ಮುದುಡಿ ಜೀವನದ ಹೊಸ ಕ್ಷಣ
ಆರಂಭವಾಗುವುದು ಸತ್ಯ.
ಅಂದರೆ ಜೀವನ ಮತ್ತು ಮರಣಗಳು
ಒಂದುಗೂಡಿದರೆ ಮರಣದ ಭಯವಿಲ್ಲ.
ಆತ್ಮ–ಪರಮಾತ್ಮ–ಜೀವಾತ್ಮ
ಸಾರ ಸರ್ವಸ್ವ ಅಂಗೈಲಾಡಿರಲು
**Awareness choiceless awareness**
ತಂತ್ರವನ್ನು ಪುಣ್ಯವೇದಿಯುಮೇಲೆ ಘೋಷಿಸಿದ
ತೇಜೋಮುಖಿ ಶಾಂತಪ್ರಶಾಂತ
ದಾರ್ಶನಿಕ ಶ್ರೀಕೃಷ್ಣಮೂರ್ತಿ
ಭಾರತ ಜನನಿಯು ಶ್ರೇಷ್ಠ ಪುತ್ರ ಕಣ!
ಪುನರ್ಜನ್ಮ ಅಥವಾ ಪುನರುತ್ಥಾನದ
ಅರಿವು ಪರಿಭಾವಿಸಿ ತಿಳಿವುದಲ್ಲದೆ ಬೇರಿಲ್ಲಂ.
ಮರಣದಿಂದೆ ದೇಹ ನಶಿಸಿದೊಡೆ
ಪ್ರಜ್ಞೆಯ ಪ್ರವಾಹ ಅಳಿಯದು.
ಜನನ ಮರಣಗಳ ಪ್ರವಾಹದೊಂದಿಗೆ
ಪ್ರಜ್ಞೆಯ ಪ್ರವಾಹವೂ ಮುಂದುವರಿಯುವುದು
ಪ್ರಜ್ಞೆಯ ಅಂಗಾಂಗಗಳೆನಿಪ
ಸುಖ–ದುಃಖ–ಅಸೆ–ನಿರಾಸೆ–ರಾಷ್ಟ್ರೀಯತೆ–
ಲೈಂಗಿಕ ಪ್ರವೃತ್ತಿ ಇತ್ಯಾದಿಗಳೆಲ್ಲ
ಜೀವಂತವಿರುವುದರಿಂ ಪ್ರಜ್ಞೆಗೆ ಸಾವಿಲ್ಲ.
ಪ್ರಜ್ಞೆಯ ಪ್ರವಾಹ ಏಕ ಪ್ರಕಾರವಾಗಿ
ಮುಂದೆ ಮುಂದೆ ಸಾಗುವಿಕೆ ದಿಟವೆಂದರೂ
ಅದು ದೇಹವೂ ಅಲ್ಲ; ಮನುಷ್ಯನೂ ಅಲ್ಲ.
ಮುಂದುವರಿಯುವ ಪ್ರಜ್ಞೆಯ ಪ್ರವಾಹದಲ್ಲಿ

→

ನಾನು–ನನ್ನದು
ಎಂಬುದರ ಅರ್ಥ ತಾನಾಗುವುದೇ ಪ್ರಜ್ಞೆ.
ಶ್ರೀ ಕೃಷ್ಣಮೂರ್ತಿಗಳ ಪರಮ
ವಿಚಾರಧಾರೆಯ ಸಾರಾಂಶವಿದಂ ಭಾವಿಸು ಮನವೇ!

—o—

## ಸಗ್ಗದ ವೀಥಿ

ಓಹೊ, ಎನಿತಂದವೊ ಸುರಸುಂದರವೀ ವೀಥಿ!
'ಟಾರು' ಬಳಿದಾ ಕಾಳವರ್ಣ;
ಇಕ್ಕೆಲದಿ ರಂಗು ರಂಗಿನ ಗೃಹಗಳ ಶ್ರೇಣಿ;
ಮನೆ ಮನೆಯಲಿ ರಮ್ಯೋದ್ಯಾನ;
ಜಗಜಗಿಸುತಿಹ ವಿದ್ಯುದ್ದೀಪಗಳ ಸರಮಾಲೆ.

ಅಹ, ಬದಿಯಲಿ ಪಥಿಕರ ಗಜಿಬಿಜಿಯ ಕಾಲಾಟ;
ಮಧ್ಯೆ ಜರ್ರನೆ ಹರಿವ ವಿವಿಧ
ವರ್ಣರಂಜಿತ ವಾಹನಾದಿಗಳ ಹರಿದಾಟ;
ಇಕ್ಕೆಲದಲಿ ಹಚ್ಚ ಹಸುರಿನ
ಗಗನ ಚುಂಬೀ ದೇವದಾರು ದ್ರುಮಗಳ ನೋಟ!

ಸೂಜಿಯೋಲ್ ನೇರವಾಗಿ ಅಂಕು ಡೊಂಕಿಲ್ಲದೆ
ಹರಿದು ಸರುವರಿಗೂ ಸಮನಾಗಿಹ ಹಾದಿ;
ಲೋಕಮಾನ್ಯರು, ಹಿರಿಯರು, ಬಡವರು ದಿನದಿನಂ
ಓಡಾಡುವ ಸಾರ್ವಜನಿಕ ಬದ್ಧ ವೀಥಿ;
ನಮ್ಮಂತ್ಯಯಾತ್ರೆಯಲಿ ಇದುವೆ ಸಗ್ಗದ ವೀಥಿ!

—o—

# ಗುಲಾಬಿ

ಅವನಿಯೊಳ್ ವರಪೂಜೆಯ ಬಯಸಿ ಸುರ ಸುಮವೆನೆ
ಮೈವೆತ್ತಿ ಬಂದವೊಲ್ ನಳನಳಿಸಿ ಹಚ್ಚನೆಯ
ಹಸಿರು ಗಿಡಗಳಲಿ ವರ್ಣವರ್ಣಾಂತು ಅರಳುವ
ತರತರದ ಗುಲಾಬಿ ಸುಮ ಸಮುಚ್ಚಯಂ ನಿತ್ಯ
ಸತ್ಯ ಸುಂದರಂ ನೋನೋಳ್ಪ ರಸಪೂರ್ಣ ದೃಷ್ಟಿಗೆ.
ದಳದಳಗಳರಳಿ ಮೃದು ಕೌಶೇಯ ವಸ್ತ್ರದಿಂ
ಅಲಂಕೃತವೊ ಎನಲ್ಕೆ ಮಂಜುಳ ಮನೋಹರಂ !
ಹೊನ್ನಕುಂಡದ ಸುತ್ತ ರೇಣುರೇಣುಗಳ್ ನೆರೆ
ಕೋಟೆಗಟ್ಟಿರ್ದವೊಲ್ ಸಾಲು ಸಾಲೈಸಿರಲ್
ಮಿಸುನಿ ರೇಖೆಗಳವೋಲ್ ಸುವರ್ಣ ಸಿಂಗರಂ.
ಕೈಯಿಂದ ಮುಟ್ಟಿದರೆ ಮಾಸುವವೊಲ್ ಸುಕೋಮಲ.
ಮೂಸುವೆನೆನೆ ನಾಸಿಕಮಂ ತುಂಬುವನಿತು ಕಂಪು ;
ನೋಳ್ಪೆನೆನೆ ಕಂಗಳ್ ಕರಗಿ ದ್ರವಿಸುವನಿತು ಸುರ
ಬಂಧುರ.   ಇನಿತು ಅಪೂರ್ವ ಸೃಷ್ಟಿಗೆ ಆವಾವ
ಮೂಲ ವಸ್ತುವೈ ಈ ಜಗದೊಳ್ ತಿಳಿದು ನೋಡಾ !
ಪರಬ್ರಹ್ಮನ ಕಾರ್ಯನಿಷ್ಠೆಯಂ ಮನುಜ ಕೃತಿಗಳ್
ಸರಿಗಟ್ಟಲುಂಟೆ ? ಆವಾವ ಮಾನದಂಡಂ
ಅಳೆಯುಬಲ್ಲುದೀ ಕಮನೀಯ ಕೋಮಲ ಪುಷ್ಪ
ಕೋಟಿಯಂ ? ಅಃ ! ಗುಲಾಬಿ–ಚೆಂಗುಲಾಬಿ–ತ್ರಿಲೋಕ
ಮೋಹನೀಯ ಸಿರಿ ಗುಲಾಬಿ ! ನಿನ್ನುಳಿದಾವ ವರ
ಪೂಜೆ ಸಲ್ಲುವುದೈ ನಿತ್ಯ ದೇವಾರಾಧನೆಗೆ ?
ಕೇಳ್, ಮೊನಚು ಮುಳ್ಳುಗಳ ತಾಣದಿ

→

ಪೂವು ಮೂಡಿದ ರೀತಿಯುಂ ಸಂಭಾವಿಸಿ ನೋಡೆ,
ಅರಿವಳಿಕೆಗೆ ಬರುವ ಚಿತ್ತಾರ ಭಾರತ ಸತಿಯರ
ಬಾಳ್ಗಡಲಿನ ಗೋಳೆಂದೊಡೆ ಅಹುದೆನಿಸಲಿದುಂ
ಕವಿವರ್ಯರ ಕಲ್ಪನಾ ವಿಶೇಷಮೇನಲ್ತು!

—o—

## ನಾಸ್ತಿ ಮೇಘ ಸಮಂ ತೋಯಂ

ಧೋ ಧೋ ಸುರಿದುದು ಕುಂಭದ್ರೋಣ ಮಳೆ
ಸಿಡಿಲು ಮಿಂಚುಗಳ ಕೂಡಾಡಿ, ರೋಷ
 ಭೀಷಣತೆಯ ಕಾರಿ! ಜಡಿಮಳೆ ಜೀರ್
 ಜೀರನೆ ಜಡಿಕುಟ್ಟಿ ಸುರಿದುದು ಒಡಲ್
ರೋಷದಲಿ ಬಿರುಗಾಳಿಯೊಡನಾಡುತ
ಕಾರ್ಗಾಲದ ಕಾರ್ಮಳೆಯು ಮೀರುವೊಲ್ !
 ಗಗನದೇಶವೆ ಕರಗಿ ಸುರಿಯುತಿಹುದೊ,
 ಕಾದಂಬನಿ ಕಾಲ್ಕುಸಿದು ಬೀಳುವುದೊ
ಎನಲ್ ಭೂಮಿ ಜಲ ರಾಶಿಯಲಿ ತುಂಬಿ
ತುಳುಕೆ, ತೇಲಿದುವು ಮನೆ ಮಠಗಳ್ ನೆಲೆ
 ಗೆಟ್ಟು! ಜೀವಕೋಟಿಯು ತರಗೆಲೆಯೊಲ್
 ಕೊಚ್ಚಿ ಹೋದುದು ಅರೆ ತಾಸಿನಲಿ.
ಭೂ ಭಾರವ ಕಳೆವವೊಲ್ ! ಮನೆ ಮಾರು
ಎಲ್ಲಂ ತೊಳೆದು ಜಲವುರಳಿ ಸಾಗಿತು
 ನದೀಮುಖವಾಗಿ! ಎಂತಪ್ಪ ಮಳೆಯೊ
 ಶಿವನೇ! ನೀನೇ ನಿರ್ದಯಿಯಾಗಿರಲ್
  ಇನ್ನಾರ್ ಪಾಲಿಪರಯ್ಯಾ ?

—o—

# ಸಂಜೆಯುವರು

ಕರ್ನಾಟಕ ಸಾಹಿತ್ಯ ಜಗದಲಿ ನೀನಾದೆ
ಅಚ್ಚಳಿಯದ ನಿತ್ಯ ಜ್ವಲಿಸುವ ನಕ್ಷತ್ರ ಕಣ!
ನಡೆನುಡಿಯಲಿ ಮಡಿಯಾಗಿ, ಸಕ್ಕರೆ ಸವಿಯೊಲ್
ಸವಿಯಾಗಿ ಓಜೆಯನೆ ಓಜೆಗೊಳಿಸಿ ನಿಚ್ಚಂ.
ಕಪ್ಪುರಕೆ ಕಿಡಿಯಿಟ್ಟವೊಲ್ ಬೆಳಗಿ, ಸತ್ಯಮಂ
ಸೌಂದರ್ಯ ಕೂಡಿದವೊಲ್ ತೊಳಗಿ ಬೆಳಗಿ ನಿಂದ
ಸೀಮಾ ಪುರುಷ! ಕಾಲನದಿಯಲಿ ಮುಳುಗಿ ತೇಲಿದಾ
ಮಾನುಷಿ! ತವ ಮುನ್ನಡೆಯ ಹೆಜ್ಜೆಗಳಿಂದೆಮ್ಮ
ನಿಚ್ಚ ನಡೆಗೆ ಮಂಗಳ ಕಾನ್ತಿ ಮೇಣತಿ ಶಾಂತಿ!
ಇಂದಿನ ಯುವ ಪೀಳಿಗೆ ನಿಮ್ಮ ನಡೆಯನುಸರಿಸಿ
ನಡೆದೊಡೆಲ್ಲಿಯು ಕುಂದುಕೊರತೆ ಪೇಳ್? ನಿಜದಿಂ
ಪ್ರಪಂಚ ಜ್ಞಾನ–ವಿಜ್ಞಾನ–ಸುಜ್ಞಾನಾದಿ
ಸುವಿದ್ಯಾ ದ್ರವ್ಯವಂ ನಿರ್ಲಕ್ಷಿಸಿ ಪಿರಿಯರಂ
ದುರ್ಲಕ್ಷಿಸಿ ಕರ್ಮಾಸೆ–ಪೆರ್ಮಾಸೆಗಳಂ ಪೊತ್ತು
ಲೋಕ ಕಂಟಕರಾದೊಡೆ ರಾಷ್ಟ್ರದ ಮರ್ಯಾದೆ–
ಮಾನಗಳ ಗತಿಯೇಂ ಪರಿಭಾವಿಸು ಆಚಾರ್ಯ!
ಈ ಕಾಲಮಾನದಲಿ ನಿನ್ನಂಥ ಮಾನಿಸರ್
ವಿರಳಮಾದುದು ಜೀವನ ಕಾಂತಾರದಲಿ ಎನೆ
ನೀ ನಂಬುವೆಯೋ ಇಲ್ಲವೋ ಹೇ ಆಚಾರ್ಯ!
ನಿಮ್ಮ ಬಾಳಿನ ಸರ್ವಗುಣ ಶಾಂತಿ ಎಲ್ಲೆಡೆಯು
ರಸಕಾರ್ಯಗಳಿಗುಪಮೆಯಾಗುಳಿಯೆ ಎನಿತೆನಿತು
ಪೆರ್ಮೆಯಾನಂದದಿಂ ಸ್ವರಾಜ್ಯದ ಸಂಭ್ರಮವು
ಉಕ್ಕುತಿತ್ತೊ ಕಾವ್ಯರಸ ವೀಣಾ ತಂತ್ರಿಯಂ

→

ನುಡಿಸಿ ತೂರ್ಯವಾಣಿಯುಂ ಮೊಳಗುತಿತ್ತೊ ಅರಿದೊಡೆ
ಒಳ್ಳಿತಯ್ಯ ಆಚಾರ್ಯ! ನಿಮ್ಮುತ್ತಮಿಕೆಯುಂ
ಇಕ್ಷು ರಸವಾಗಿ ಹಾಲ್ಜೇನಾಗಿ ಹರಿಯುತಿರೆ
ಕೀರ್ತಿಪರಿಮಳವಾಸಿಸದೆ ಜ್ಞಾನದಿಂ ಪರಮ
ಕರ್ಮದಿಂ ಸಂಜೀವನವನಾರೈದ ಮಾನ್ಯಂ!
ನಿನ್ನ ನೆನೆದು ಕವಿ ಕಾವ್ಯವಾಣಿಯ ಮೊಳಗಿಸುವೆ
ಭಕ್ತಿಯಿಂ ಹೇ ಸ್ವರ್ಗೀಯ ವರ ಆಚಾರ್ಯನೇ!

—o—

## ಬೇಸರ-ಬೇಸರ

ಎಲ್ಲಿಂದ ನೀ ಬಂದೆಯೊ? ನಿಜದಿಂ
ಜನಮನಂಗೆಡಿಸಿ ಜ್ಞಾನಂಗೆಡಿಸಿ
ನರಕದ ಪುಳುವಾಗಿಸೆ ಬಂದೆಯಾ
ಬೇಸರವೆ? ಆವೊಂದು ಗುರಿಯಿರದ
ಆವ ಉತ್ತಮ ಕೈಂಕರ್ಯ ಬಯಸದ
ಸೋಮಾರಿತನಕೆ ನಾಂದಿ ಹಾಡುವ
ಬೇಸರವು ಮನಗೊಂಡರೆ ಮೈಯೊಳ್
ಪಾಲುಮಾರಿಕೆಯಲ್ಲದೆ ಬೇರೇಂ
ಉಳಿಯುಬಲ್ಲುದು ಪೇಳ್? ಬೇಸರಂ
ಎಲ್ಲ ಪ್ರಗತಿಗೂ ಕಿಚ್ಚು ಹಚ್ಚುವಂ!
ಆಸಕ್ತಿಯಂ ಬಡಿದು ಜಡಿ ಕುಟ್ಟಿ
ನಿರಾಸಕ್ತಿಯಂ ಬೆನ್ನು ಚಪ್ಪರಿಸಿ
ಮುಂಬೆಳಸಿ ಜೀವನವ ಕಂಗೆಡಿಸಿ
ಜೀವಶ್ಯವವಾಗಿಸುವ ನಿನ್ನಯ
ಅವತರಣ ಮನುಕುಲಕೆ ಮಿತ್ತು ಕಣ!
ಪೇಸಿಕೆಯ ನಾಚಿಕೆಯ ಹೊಲಸು ಕಣ!

—o—

೧

ಮಿನ್ನೆ ಒಂದಾನೊಂದು ಕಾಲದೊಳ್ ಕೇಳಿರ್ದ
ಕಥೆಯೊಂದನೊರವೆ ಕೇಳಿರೈ ಮಮ ಬಂಧುಗಳೆ!
ಧರ್ಮನಿಷ್ಠೆಯಂ ಎಲ್ಲೆಡೆಯೊಳ್ ವಿರಾಜಮಾ-
ನವಾಗಿರ್ದ ಕಾಲಮೆ ಕಾಲಂ!
ಜಗಮೆಲ್ಲಂ
ಪುರುಷಿನಿಂ ಪುರುಡಿನಿಂ ಮುಂದೋಡುತಿರಲ್ ಆನ್
ತಾನೆಂದು ಪೈಪೋಟಿಗಿಳಿದಿರ್ದ ಬಲಾಬಲದ
ನೆಚ್ಚು-ಕೆಚ್ಚು ನಿಚ್ಚ ಕಾರಣಂ ಪುರ್ಚಿಂಗೆ!
ಜನಮತಿ ಮಸೆಗತ್ತಿಯೊಲ್ ಹರಿತಮಿರಲ್ ಕೊಚ್ಚಿ
ಕಂಡರಿಸುವ ಸ್ಫೂರ್ತಿ ಅತೀವ ರಾಜ್ಯದಾಹಂ
ಮೇಣ್ ಧನದಾಹಂ ಎದೆಯಲಿ ತುಂಬಿ ತುಳುಕಿರೆ
ಯುದ್ಧವಾರ್ತೆ ವಿಜೃಂಭಿಪುದು ಕಾಲಯೋಗದಲಿ!

೨

ಭೋರ್ ಭೋರನೆ ನುಗ್ಗುತಿಹ ಅಲೆಗಳೋಳಿಯಲಿ
ತತ್ತರಿಸುತ ಮುಂಬರಿಯುತಿರ್ದ ಪೆರ್ ಜಹಜಿನ
ಚಾವಣಿಯ ಮೇಲೆ ನಿಂದಿರ್ದನಾ ಎಳೆಬಾಲ
ಕೆಸಬಿಯಾಂಕಂ. ನೆಟ್ಟದಿಟ್ಟಿಗೆಲ್ಲೆಡೆಗಳಿಂ
ನುಗ್ಗಿ ಬರುತಿದ್ದ ರುದ್ರ ಮನೋಹರ ಅಲೆಗಳ್
ಮೇಲಾಯ್ದು ಬರುವವೊಲ್ ಕಂಡು ಬರುತಿರೆ ಭಯಂ
ಕಾಪಳಿಸೆ ಮನಂ ಎಳೆಮೊಗದೊಳೆಸೆದುದು ಭೀತ
ಮುದ್ರೆ ನೀಲಗಪ್ಪಿನವೊಲ್! ಒಡಲ್ ಬಳ್ಳಿಯುಂ
ನಡುಗಿದುದು ತರತರಂ! ಸುತ್ತಲ್ ಅಲೆಗಳೊತ್ತಿ →

ಅಪ್ಪಳಿಸೆ ತುಯ್ಯಲಾಡಿತು ನಾವೆ ಅತ್ತಿತ್ತ.
ಹಾರುತಿದೆ ನಾವೆಯು ಪಟ ಗಾಳಿಯ ಪೊಯ್ಲಿಂದೆ
ಪಟಪಟನೆ ಸದ್ದುಗೈಯ್ಯುತಿತ್ತೆಡೆವಿಡದೆ. ಆಹಾ!
ಚಳಕು ಪಳಕೆಂಬ ಮೀನಾಂಗಳಾಟಂ ; ತೆಕ್ಕನೆಯೆ
ಅವುಗಳಿಗೆರಗುವ ವಿವಿಧ ಜಲ ಪಕ್ಷಿಗಳ ಬೇಟಂ.
ಚಳಕ್ಕನೆ ಜಿಗಿವ ಪೆರ್ ತಿಮಿಂಗಿಲಗಳ ಅಂದ
ಚೆಂದಂ ; ಮತ್ತಾ ಚಿಣ್ಣ ಮೀನಾಂಗಳ ಜೆನ್ನಟ್ಟಿ
ತಿಂಬುದಂ ನೋಡುತಿರೆ ಸುಖದುಃಖಗಳ್ ಎದೆಯು
ಗೂಡಿನೊಳ್ ಒಂದಾದುದಾ ಚಣದಲಿ. ಪಯಣದಿ
ತಾನೊರ್ವ ಎಳೆಯನಿರ್ದು ಆಟವಾಡಿ ನಲಿಯಲ್
ಸಮಾನಸ್ಕಂದರಿರದಿರೆ ಯಾನವೇ ಬೇಸರಂ.
ದೂರ ದೂರ ಸಾಗಿದುದಾ ಮಹಾ ಬೈತ್ರ ನೆರೆ
ಸಾಸದಿಂ ಅಲೆಗಳೋಳಿಯಲಿ ಮುನ್ನುರ್ಗಿ ಕಲಿ
ಭೀಮನಂ ತಾ ಹೋಲಿ! ಬಾಲ ಕೆಸಬಿಯಾಂಕಂ
ಕಣ್ಬಿಟ್ಟ ನೆಟ್ಟು ಭೋರೆಂದು ಭೋರ್ಗರೆವ ಜಲ
ರಾಶಿಯೀ ಎಣೆಯಿಲ್ಲದಾನೋದವೀ ನಿತ್ಯ
ಚಿರಂತನ ಯಾತ್ರೆಯೀ ಲೋಕ ಕಲ್ಯಾಣವೀ
ಪರಮ ಮಂತ್ರವೀ ಭವ್ಯ ಪಾತ್ರವೀ ವಾರ್ಧಿಯ
ಪಾರವಿಲ್ಲದ ವ್ಯವಹಾರಮಂ ನೋಡುತಿರೆ
ಎಳೆಯ ತನು ಮನ ಪ್ರಾಣಗಳ್ ಮಂತ್ರಮುಗ್ಧಂ.

೩

ನೌಕೆಯು ಇಕ್ಕೆಲಗಳಲಿ ಜಲ ಮುತ್ತುಗಳ್ ಹಾರಿ
ಜರ್ರನೆ ಜಲಧಿಯಲಿ ಬೆರೆತು ಮತ್ತೆ ಮುತ್ತೈಸುವ
ಕಾರ್ಯಕಾರಣ ವೈಖರಿಯಲಿ ಮನವಿಟ್ಟಿರಲ್
ಕೆಸಬಿಯಾಂಕಂ ಕಂಡನೊಂದು ನೌಕೆಯನು ದೂರ
ದೂರದಲಿ. ಆಗಳಾ ಬಾಲಕಂ ತಂದೆಯಂ

→

ಕರೆದು ತೋರಿದನಾ ನೌಕೆಯಂ. ನೋನೋಡುತಿರೆಯಿರೆ
ಸವಿಾಪಿಸಲಾ ಜಹಜು ಶತ್ರುಗಳದೆಂದರಿತು
ಮನಗತಿಯಲಿ ಮೂಡಿದ ಗಲಿಬಿಲಿಯನೇನೆಂಬೆ ?
ಭಯ ಭೀತಿಯ ಗಾವರದೊಳ್ ತಂದೆ ಕುವರಂಗೆ
ಎಂದನೆಂತೆನೆ "ಎಲೆ ಮಗನೇ ! ಶತ್ರು ನೌಕೆಯಿದು
ದಿಟಂ. ಇನ್ನು ಕಾಳೆಗಕೆ ಕಾಲ್ಕೆರೆದು ನಿಲ್ವರ್
ನಾವ್ ಪೋರದೆ ಬೇರೆ ಗತಿಯಿಲ್ಲಂ. ಈಗಳಾಂ
ಕೆಳಗಿಳಿದು ಶತ್ರುಗಳ ಪೊಯ್ಯು ಬಡಿದು ನರಕಕೆ
ಕಳಿಸದಿರೆ ಎಮಗಕ್ಕು ಗಂಡಂ ! ಎನುತಿಳಿದಂ
ಏಣಿ ಮೆಟ್ಟಿಲಂ. ತಳಭಾಗದಲಿ ಎಲ್ಲರುಂ
ಒಟ್ಟಯಿಸಿ ಶತ್ರುಗಳ ಮೇಲೆ ಬಾಣಗಳ ಸರಿ
ಸುರಿಸಿ ಕಾದಾಡಿದರ್. ಆದೊಡಂ ಬಹು ಜನರ್
ಇರ್ದ ಶತ್ರು ಜನರ ಕೈ ಮೇಲಾಗಿ, ಇತ್ತಣಂ
ಬಲ ಕುಗ್ಗಿ ಸೋಲ್ತು ನೆಲಕ್ಕೊರಗಿದರ್ ಅಸು ತೆತ್ತು.
ಅಲ್ಲಿಗುಂ ತಣಿಯದ ಶತ್ರು ಜನರ್ ಕೆಚ್ಚಿನಿಂ
ರೋಷದಿಂ ಕಿಚ್ಚಿಟ್ಟರ್ ಜಹಜಿಗೆ
ಆಗಳ್
ಕಳೆದುಳಿದ ಕೆಲಮಂದಿ ಪ್ರಾಣ ಭಯಭೀತಿಯಿಂ
ತೆಕ್ಕನೆಯೆ ದೋಣಿಯನಿಳಿಸಿ ಜಲಧಿಗೆ ವಿಣ್ಣನೆ
ಪಾರಾಗುವ ಸಜ್ಜಿನಲಿರಲ್ ಬಾಲಕ ಕೂಗಿ
ಕೇಳಿದನ್ "ತಂದೆಯೆ ಎಲ್ಲಿರುವೆ ? ನಾನಿಳಿದು
ಕೆಳಗೆ ಬರಲೇ ?" ಅದಕ್ಕೋರ್ವನುತ್ತರಿಸಿದಂ,
"ಮಗುವೆ ! ಈಗಳ್ ಹೇಳಿ ಕೇಳಿ ಸಮಯವಿಲ್ಲಂ.
ನೀ ಕೆಳಗಿಳಿದು ಬಾರೈ, ದೋಣಿ ಇಳಿಯುತಿದೆ ಮಾ
ಸಾಗರಕೆ, ನಾವ್ ಕೂಡಲೇ ಪಾರಾಗಲಕ್ಕು !"
ಆ ನುಡಿಯನಾಲೈಸಿದ ಕೆಸಬಿಯಾಂಕಂ ಮತ್ತೆ

→

ಕೂಗಿದಂ "ತಂದೆಯೆ, ಕೆಳಗಿಳಿದು ಬರಲೇ ?" ಆ
ಪ್ರಶ್ನೆಗುತ್ತರಿಸಲಿಕ್ಕೆ ತಂದೆ ಬದುಕಿದ್ದರಷ್ಟೆ ?
ಅದನರಿಯನಾ ಮುಗ್ಧ ಕೆಸಬಿಯಾಂಕಂ ಇಳಿದು
ಬಾರದಿರೆ ದೋಣಿಯಿಳಿಸಿದ ಜನರ್ ಜಹಜಿನಿಂ
ಪಾರಾದರ್. ಮತ್ತಾ ಜಹಜಿನಲಿ ಕಿಚ್ಚಿನ
ಜ್ವಾಲೆ ಧಗಧಗಿಸಿ ಮೇಲೆದ್ದುದು ಕೆನ್ನಾಲಿಗೆ
ಚಾಚಿಚಾಚಿ ಬಾಲಕನೊರ್ವೆ ಸುತ್ತಮುತ್ತಲ್
ನೋಡಿ ಕೂಗಿದಂ "ತಂದೆಯೆ ಕೆಳಗಿಳಿದು ಬರಲಿ ?"
ದೈನ್ಯವಾಣಿ ಮೊಳಗಿಸಿದಾಗಲ್ತೆ ಡೆಕ್ಕನ್ನೆ
ಆವರಿಸಿ ಕಬಳಿಸಿತು ಅಗ್ನಿಜ್ವಾಲೆ ಕಂದನ
ಸಹಿತ. ಬಾಲಕಂ ತಂದೆಯಪ್ಪಣೆಯಂ ಬೇಳ್ದು
ಪ್ರಾಣಮಂ ತೆತ್ತಂ. ಚಣಾರ್ಧದೊಳ್ ನಭವೇರ್ದು
ಸ್ವರ್ಗದ ಮಹಾದ್ವಾರದಲಿ ಸಂಧಿಸಿ ಪಿತನಂ
ಪಡೆದನಾತ್ಮಶಾಂತಿ ಕವಿಕಗ್ಗ ರಸಪಾನಕೆ
ತಾನಾಗುವವೊಲ್ ಬಿತ್ತು !

—o—

## ಜಗನ್ಮಾತೆ

ಭವ್ಯ ಭವತಾರಿಣಿ ಜಗನ್ಮಾತೆಯು
ಮಾತೃಲೀಲೆಗೆ ದೀಕ್ಷೆನಿಂತವೊಲ್
ತ್ರಿಶೂಲಧಾರಿಣಿಯಾಗಿರಲ್, ನೋಡು !
ದಿವ್ಯರೂಪು ಮೆರೆದಿದೆ ಕಣ್ಮುಂದೆ !

—o—

# ನಾಳೆಯ ರಾಣಾರಂಪ

ನಾಳೆ–ನಾಳೆ–ನಾಳೆ–ನಾಳೆ!
ನಾಳೆ ಮಾಡುವೆ ಎಂಬುದು
ಇಂದಿನವರ ಮಂತ್ರ ತಂತ್ರ.
ನಾಳೆ ಎಂಬುವವರ ಮನೆ-ಮನ ಎರಡೂಹಾಳು!
ನಾಳೆಯ ನೇಮದಲಿ
ಇಂದಿನ ಕಾಯಕವ ನಾಳೆಗೆ ತಳ್ಳಿ
ಜೀವನ ಜೋಕಾಲೆ ಹೊಡೆದು
ಕಂಡರೂ ಕಾಣದವೊಲ್
ಕಣ್ಮುಚ್ಚಿ ಕಾಲ ಕಳೆವವರ ಪರಿಪಾಡಿಗೆ
ಮರ್ಮರ ಮರುಗುತಿಹುದೆನ್ನ
ಮನಃಚಿತ್ತ ಕಾಂಡ.
ಆ ನಾಳೆ ನಮ್ಮ ಕೈಗೆಟುಕದೆಯೇ
ನಾಳೆ ನಾಳೆ ನಾಳೆಯಾಗಿಯೇ
ಮುಂದುವರಿಯುತಿದೆ ಮರೀಚಿಕೆಯಾಗಿ!
ನಮ್ಮಲ್ಲಿ ನೋಮಾರಿತನ
ಮುಂಬೆಳೆಯುತಿದೆ ಪೆಡಂಭೂತವಾಗಿ!
ಇಂದು–ಈಗ ಎಂಬುದು ಹುರುಪು.
ನಾಳೆ ಎಂಬುದು ನಾರುವ ನರಕ.
ಇಂದೇ ಗೈವಾ ಸಂಕಲ್ಪ ದೊಡ್ಡದು;
ನಾಳೆಗೆ ದೂಡುವಾ ಕೃತಿ ಕೈಗೂಡದಾ ಹುಸಿ.
ಸಮಯ ಪ್ರಜ್ಞೆಯರಿತು
ಕಾಲಧರ್ಮವ ಬೆನ್ನಟ್ಟಿ ಗುರಿ ಮುಟ್ಟಿರೊ
ಕಲಿತನದ ಹುಮ್ಮನಲಿ!

—o—

ಅಣು ಸಮರಕೆ ಸಿದ್ಧಮಿಹ ಅದ್ಭುತ ರಾಷ್ಟ್ರಗಳ
ಪೈಪೋಟಿ ಏಂ ಭೀಕರ ಭೀಷಣಮಾ ಲೋಕ
ಜೀವನಗತಿಗೆ ?  ಮಿಳ್ತು ಮಾರಿಗೌತಣಮಿಕ್ಕುವ
ದುರ್ಯೋಜನೆಗೇನೆನಲಕ್ಕುಮೊ ಸಿರಿರಮಣನೆ !
ಕಡು ಗೋಳಿನಾ ಪ್ರಾಣಸಂಕಟದ ನರಳಾಟ
ನಿಡುಗಂಬನಿಯ ಕಡಲು ಎಲ್ಲೆಡೆಯುಂ ಕಾಣುತಿರೆ
ಎಂತು ಜನ ಸೈಪರೋ ಇನ್ನೆಂತು ರಾಷ್ಟ್ರಗಳ
ಸಂಬಾಳಿಪರೊ ಪೇಳೊಡೆಯಾ !

ಮಾನವರಾಗಿ
ಸಂಜನಿಸಿ ಮಾನವೀಯತೆ ಅಲ್ಲದೊಡೆ ಎನಿತು
ನಷ್ಟಮೈ ತ್ರಿಲೋಕಕೆ.  ಮನುಜಂ ಮನುಜಂಗೈವ
ಘೋರಾತಿಘೋರ ಅಪರಾಧಮಂ ಪುಲಿ–ಸಿಂಹ
ಮುಂತಪ್ಪ ಕ್ರೂರ ಮೃಗಗಳೇಂಗೈದಪುವು ಪೇಳ್ !
ಲೋಕಕಲ್ಯಾಣಮೆಸಗುವುದೆ ಮಾನವ ಧರ್ಮ.
ಅದಂ ಕೈವಿಟ್ಟು ಕಗ್ಗೊಲೆಗೈವುದು ಸಾಮಾನ್ಯ
ಅಪರಾಧಮೆ ಪೇಳ್ !  ಇಂದಿನೀ ನಾಗರಿಕ
ಕಾಲಮಾನದ ಜಾಗತಿಕ ಪ್ರಜ್ಞೆಯುಂ ಮೂರ್ತ
ರೂಪಮಾದ ಕಾಲಮಾದೊಡಂ ರಣದಾಹ !
ಛಿಃ !  ಎಂತಹ ಹೇಯಾತಿಹೇಯಮೊ ಈ ಪರಿಯ
ರಣದಾಹ !  ಕೈಯಾರೆ ಮನವಾರೆ ಕಡುದುಃಖ
ಸಂಕಟವ ತಂದಿಕ್ಕುವರೇಂ ಜೀವನ ಗತಿಗೆ ?
ಕಣ್ಣಿರ್ದು ಅರಿವಿರ್ದು ಕೊಲೆಗೈವ ಮಾನವರ
ರಣದಾಹಕೇನೆಂಬೆ ?  ನಾಯೋಲ್ ನರಿಯೋಲ್

→

ಮೃಗೀಯ ದುಷ್ಟಪ್ರವೃತ್ತಿಗೆಣೆಯೇ ಇಲ್ಲ
ಈ ಲೋಕದೊಳ್.
ಓ ಭಗವನ್! ಇದ ನೀನೆಂತು
ಸೈಪೆಯೋ ಈ ಪರಿಯ ಧೂರ್ತ ಜನಜಂಗುಳಿಯ
ಪರಮಾಣು ಸಮರದಿಂ ಜೀವಕೋಟಿಯುಂ ಅಗ್ನಿ
ಜ್ವಾಲೆಗೆತ್ತ ಕ್ರಿಮಿಕೀಟಗಳವೋಲ್ ಬೋಂಕನೆ
ಪಟಪಟಾಯಮಾನದಿ ಸಿಡಿಸಿಡಿದು ಉರಿದುರಿದು
ಸಾಯ್ವುರಲ್ತೆ ಕೆನ್ನೆತ್ತರ್ ಕಾರಿ? ಹಾ, ಇದಂ
ಎನಿತನ್ನೆಯಮೊ ಆಪನಿತು ಭಾವಿಸಿ ನೋಡಾ!

ಪಿಂತೆ ಮತಿಗೆಟ್ಟ ಜಾಗತಿಕ ರಾಷ್ಟ್ರಂ ಹಿರೋಶಿಮ
ಮೇಣ್ ನಾಗಸಾಕಿಗಳ ಮೇಲೊಗೆದ ಅಣುಬಾಂಬು
ಆಸ್ಫೋಟಿಸಿ ಗೈದ ಭಯಂಕರ ಅನಾಹುತಂ
ನೆನೆ ಮನವೆ! ಅಣು ಸಮರದಿಂ ನಾಶ ಹೊಂದಿದಾ
ಬಳಿಕ್ಕಂ ಕಳೆದುಳಿದಿರ್ದ ಜೀವಜಾತಿ ಕ್ರಮೇಣ
ತಾನಪ್ಪುದು ಪೆಣಂ ಎಂಬುದು ಜೀವ ವಿಜ್ಞಾನ!
ಮೇಣ್ ಅಣುಪ್ರಸರಣದಿಂ ಅರಣ್ಯಂ ಸುಟ್ಟುರಿದು
ವಸಿರ್ ಕಟ್ಟುರಿಯಾಗಿ ತಿನಲಿಲ್ಲದೆಯೆ ನೆರೆ
ಉಪವಾಸದೊಳ್ ಸಾಯ್ವುದೈ ಪ್ರಾಣಿಕುಲ ಮಮ್ಮಲ
ಮರುಗಿ! ಸುಟ್ಟುರಿವೋದ ಪುಲ್ ಮತ್ತೆ ಚಿಗುರೊಡೆಯೆ
ನೆಲದ ಕಾವು ಆರಿ ತಣಿಯಲಕ್ಕು ಎಂದೆನಲ್
ಏ ಪೇಳ್ವೆನೊ ಈ ಜಗದ ಪರಿಪಾಡು! ಮೈನೆಣ
ಕೊಬ್ಬಿ, ಕೆನ್ನೆತ್ತರ್ ಕುದಿಕುದಿಯೆ ರಣಮಾರಿಗೆ
ಔತಣಮಲ್ಲದೇನುಳಿದೀತೈ ಧರಣಿಯೊಳ್?

ಪರಮಾಣು ಸಮರ ಮತ್ತಂ ವಿಷಾನಿಲ ಸಮರ
ಒಂದುಗೂಡೆ ಎನಿತೆನಿತು ಮುಗ್ಧ ನಿರಪರಾಧೀ
ಜೀವರಾಶಿ ತೆಕ್ಕನೆ ನಶಿಸಿ ಹೋಹುದೈ ಜಗ

→

# ಮಾಲಿನ್ಯ

ಕಂಡು ಕಂಡು ಅರಿತರಿತು ನಿಚ್ಚಂ
ಪರಿಸರದ ಮಾಲಿನ್ಯಕೆಡೆಗುಡುವುದೇಂ
ಮನಃಚಿತ್ತಗಳಿರ್ದ ಮನುಕುಲಂ ?
ಮನೆಯಂಗಳದ ಕೊಳಚೆ, ಕಾರ್ಖಾನೆಯ
ಕೊಳಚೆ ನೀರಂ ನದಿಗಳಿಗೆ ಹರಿಸುವರೆ?
ಮನೆ ಬಳಕೆಯ ಕೆರೆ ನೀರನು ಸ್ವತಃ
ಮಲಿನಗೊಳಿಸೆ ಏನಪ್ಪುದು ಪೇಳ್ ?
ರೋಗ–ರೋಗ ಮೂಲವೈ ಮಾಲಿನ್ಯ !
ತಿಳಿದೂ ತಿಳಿದು ರೋಗ ಕೊಂಬರೇಂ
ಬುದ್ಧಿಯಿದ್ದು ಯೋಚಿಸಬಲ್ಲ ಜನ ?
ಭಗವಂತ! ನೀನಲ್ಲದಾರಯ್ಯ
ಈ ನರ ಜಂತುಗಳಂ ಸರಿ ಹಾದಿಗೆ
ಹಚ್ಚುವರ್ ನೀ ಪರಿಭಾವಿಸಿ ನೋಡೈ !
"ಕೊಡಲಿ ಕಾವು ಬುಡಕ್ಕೆ ಮೂಲ" ಎಂಬ
ಗಾದೆಯ ನುಡಿಗಟ್ಟು ಎನಿತು ಸಾಜಂ ?
ಕಾಲಾನುಕಾಲದಿಂ ಕೇಳಿಬಹ
ಚನ್ನುಡಿಯನಿನ್ನುಂ ತಿಳಿಯದೇಕೆ
ಮತಿವಂತ ಚಿಂತನಾಶೀಲ ಜನ ?
ಏಂ ಲಜ್ಜೆಗೇಡು ! ಏಂ ಬುದ್ಧಿಗೇಡು !

—o—

# Venice City

ಅತ್ಯದ್ಭುತವಲಾ ಅನನ್ಯ ಜ್ಞಾನ–ವಿಜ್ಞಾನ
ಸಂಯೋಜನೆಯುಂ ಸೃಷ್ಟಿಸಿದ **Venice City !**
ಅಹ, ಆಶ್ಚರ್ಯ ಮಾತ್ರಮಲ್ತು ಎಣೆಯಿಲ್ಲದ
ನಿತ್ಯ ಸೌಂದರ್ಯದಿಂ ಜಗದೇಕ ಕೃತಿಯಾಗಿ
ಕಂಗೊಳಿಪುದು ನೋಳ್ಪ ಕಣ್ ಥಕ್ಕನೆ ಸುಖಮೂರ್ಛೆ–
ಗೊಳ್ವ ಮಾಳ್ಕೆಯಲಿ! ಓ, ಅಪೂರ್ವ ನಗರಿ ವೆನಿಸ್ !
ಆ ಮಹತ್ಪೂರ್ಣ ಸಂಯೋಜನೆ–ಅಸಮಾನ್ಯ
ಸಾಮರ್ಥ್ಯ ಸಾಸಗಳಿಂ ಪೊದಳ್ದ ಸಗ್ಗದ
ಪ್ರತೀಕವೊ ಮೇಣ್ ಸಗ್ಗಮೆ ಧರೆಗಿಳಿತಂದುದೊ
ಎನಲ್ಕೆ ಮೆಡಿಟರೇನಿಯನ್ ವಾರ್ಧಿಯಂಚಿನಲಿ
ನಲ್ದಾಣಮಂ ಹೊಂಚಿ ನಿರ್ಮಿಸಿದ ಸುರನಗರಿ !
ಸುತ್ತಮುತ್ತಣಿಂ ರಪ್ ರಪ್ಪನೆ ಅಪ್ಪಳಿಸುವೊಲ್
ಮನೆಮನೆಯ ಗೋಡೆಗೋಡೆಗಳಂ ಅಲೆ ಅಲೆಗಳ್
ಮುದ್ದಿಡುತಿವೆ ಮೋದದಲಿ ! ಎಂತೀ ನಗರಮಿಂ
ಕರಗಿ ನೀರಾಗಿ ಹೋಹದುಳಿದಿದೆಯೊ ಎನಿಸಲ್
ಮನದಲಚ್ಚರಿ ತಾಂ ಧುಮುಧುಮಿಸುತ ನಿಂದತ್ತು !
ಮಿನ್ನೆ ಶತಶತ ಶತಮಾನ ಪೂರ್ವದೊಳ್ ಇಂ
ಮನುಕುಲಂ ಕಣ್ತೆರೆವ ಮುನ್ನಂ ಏನಾ ಜ್ಞಾನ
ನಿಧಿಯೊ ಇಂತಪ್ಪ ಸುರನಗರಿಯಂ ಕುಂದಿಲ್ಲದ
ಮಾಳ್ಕೆಯಲಿ ನಿರ್ಮಿಸುವೊಡೆ. ಆವಾವ ಬಗೆಯ
ಒಕ್ಕೂಟ–ಒಮ್ಮನಗಳ್ ಪರಿಶ್ರಮಿಸಿ ಈ ಪರಿ
ಮಹಾ ಜಲಧಿಯಲಿ ಸರಸವಾಡುವ ಸಾಸಮಂ
ಕೈಕೊಂಡ ಶಕ್ತಿಮತಿ ಆವ ದೈವದತ್ತಮೊ

→

ಪರಮಾತ್ಮ ಮಾತ್ರ ಬಲ್ಲಂಮೆನ್ನದೆ ಬೇರೇಂ
ತೋರದು. ಬರಿದೆ ಮಾತಿಲ್ಲಿ ನಿಷ್ಪ್ರಯೋಜನಂ!
ತ್ರಿಲೋಕ ಬೆಡಗಿನ ನಗರಮಂ ನಿರ್ಮಿಸಿ ಸುಮಂತ್ರ
ಮಾಯದಾಟಂ ಗೆಯ್ದಿಹರ್ ಪರಮ ಶ್ರದ್ಧೆಯಿಂ!

ಅಹ, ಏಂ ಮನುಜಕೃತ ಅನನ್ಯ ಅನುಪಮ ಭವ್ಯ
ಪವಾಡದ ವಾರಾಶಿ! ಪ್ರಕೃತಿಯ ಮಹತ್ತರ
ಶಕ್ತಿಯ ವಿಶೇಷಕೆ ಹೆಗಲೆಣೆಯಾದುದೊ ಎನಲ್
ಮನುಶಕ್ತಿ ಲೋಕಪ್ರಸಿದ್ಧಮೈ ಇಟಲಿ ದೇಶದ
ವೆನಿಸ್ ನಗರಿ ಕಟ್ಟೆ! ಪ್ರತಿ ಹರ್ಮ್ಯದ ತಳಪಾಯಂ
ಜಲರಾಶಿಯಲಿ ಮುಳುಂಗಿ ಸ್ವಸ್ಥಮಿರೆ ಶೋಣಿತ
ಶೈಲಿಯ ಶಿಲಾ ಪೀಠಗಳೊ ಮೇಣ್ ಕೆಮ್ಮನೆಯ
ಪೆರ್ಬಂಡೆಗಳ ವಾರ್ಧಿಯೊ ಮೇಣ್ ಕೆಮ್ಮುಗಿಲ
ಹೇರಾಶಿಯೊ ಎನೆ ಕನಕ ಕಾಂತಿಯ ಕನಕಪುರಿ!
ಮತ್ತದು ಇನ್ನೆಬರಮಿನಿತು ಬಣ್ಣಂ ಮಾಸದೊಲ್,
ಅಂದ ಚೆಂದಂ ಕೆಡದೊಲ್, ಸೌಂದರ್ಯ ನಿಧಿಯಂ
ಪ್ರದರ್ಶನಕಿತ್ತಮರ್ಪೊಲ್ ಅಚ್ಚಳಿಯದಿರ್ಪುದೇ
ಅದ್ಭುತ ವಿಶೇಷಂ! ಘನ ಸೌಂದರ್ಯಂ! ಮಹಾ
ಜಲರಾಶಿಯಲಿ ಇಡೀ ನಗರಿಯ ತಳಪಾಯಂ
ಮುಳುಗಿರಲ್ ಸುತ್ತಮುತ್ತಲೆಲ್ಲೆಡೆಯುಂ ನೀರು–
ನೀರು–ನೀರು! ಮನೆಮನೆಯ ಹೊಸ್ತಿಲ್ ಮುದ್ದಿಸುತ
ತೊಳೆಯುವ ಜಲರಾಶಿಯ ಮೊರೆತಮಂ ಕೇಳುತಿರೆ
ತನುಮನಂ ಪುಳಕಿತಂ! ಪ್ರಾಣಂ ಪರಿಭ್ರಮಣ
ಸುಂದರಂ! ಚಿತ್ತಂ ವಿಚಾರಕಲ್ಪ ಬಂಧುರಂ!

ಜ್ಞಾನ ಭಂಡಾರ ಕದಡುವನ್ನೆಗಂ ಯೋಚಿಸು
ಓ, ಮನವೇ! ಪಾಶ್ಚಾತ್ಯ ಭೌದ್ಧಿಕ ಸ್ತರದೊಳ್
ಎಂತಪ್ಪ ಪುಟ್ಟುವಳಿ! ಯಾಂತ್ರಿಕ-ನಿಜ ತಾಂತ್ರಿಕಸ್ತ

ಜ್ಞಾನ ಬಂಢಾರ ಇಂದು ನಿನ್ನೆಯುದಲ್ಲವೋ,
ಕಾಲಾನುಕಾಲದಿಂ ರಕ್ತಗತವಾಗಿರ್ದ
ಜ್ಞಾನ ವಿಜ್ಞಾನಂಗಳ್ ಲೀಲಾಜಾಲದಿಂದಲಿ
ಬಂದುದಲ್ಲಂ. ಪರಿಶ್ರಮ ಪರಿಶೋಧನೆಗಳಿಂ;
ಸ್ವಪ್ರಯತ್ನದಿಂ; ಧೈರ್ಯದಿಂ ; ಕಾರ್ಯ
ನಿಷ್ಠೆಯಿಂ; ಸಾಧನಾ ಸಂಯೋಜನೆಯಿಂ ಗುರಿ
ಮುಟ್ಟುವರ್ ಪರಮೋಚ್ಚ ಸಾಸದಲಿ ಮುಂಬರಿದು !
ಓ, ಮಮ ಜೀವನ ಬಂಧು! ಮಹಾಜಲಧಿಯಲಿ
ಮುಳುಗಿ ಮೆರೆಯುವ ವೆನಿಸ್ ನಗರಿಯಂ ನೋನೋಡಿ
ನಮ್ಮತನ ಜಾನಿಸಿ ಅರಿಯೈ ಕಾರ್ಯಕಾರಣ
ಸಂಯೋಜನೆಯಿಂ ಘನಿಸೆ ದೂರದ ಭವಷ್ಯವಂ!
ಅಹಾ! ಕವಿಮನ ಘನಿಸುವುದು ಹೆಪ್ಪುಗಟ್ಟಿದೊಲ್!
ಕವಿತಾರಮಣಿ ನಲಿದು ನರ್ತಿಸುತಿರೆ ಹೃದಯ
ರಂಗದಲಿ ತಾಳ–ಲಯ ಛಂದೋಬದ್ಧವಾಗಿ !

—o—

## ಸಾಹಿತ್ಯ

ಬೇಸರ ಪರಿಹರಿಪ ವಿದೂಷಕನ
ಪಾತ್ರ ವಹಿಸುವವನಲ್ಲ ವರಕವಿ !
ಸತ್ ಸಾಹಿತ್ಯ ಲಘು ಮನಸ್ಕರಂ
ನಲಿಸುವ ಧಿಮಿಧಿಮಿ ಕುಣಿತವಲ್ಲವು !
ಗಂಭೀರತರ ವಿಚಾರ ಸಾಹಿತ್ಯ
ನಿತ್ಯ ದರ್ಶನ ಮೂಲವಾದುದೈ
ಕಡಲಾಳ ಮುತ್ತಿನೊಲ್ ಸ್ವಚ್ಛ–
ಶುಭ್ರ ಗಂಧ ಶ್ರೇಷ್ಠ ಕವಿ ಕಾವ್ಯ.
ತಪಸ್ಸರಿಯದ ಕವಿತ್ವ ಕುಕವಿತೆ
ಕಡಲಲೆಯ ಮೇಲಿನ ಬುರುಜು ನೊರೆಯು
ಮಾಳ್ಕೆಯಲಿ ಉಕ್ಕಿಬರೆ ಬೆಲೆಯಿಲ್ಲ
ನೆಲೆಯಿಲ್ಲ ಎನೆ ಬಾಳದು ಬಹುಕಾಲ.

# ಜಿಡ್ಡು ಕೃಷ್ಣಮೂರ್ತಿ

ಇಪ್ಪತ್ತರ ಶತಮಾನ ಸಂಜೆಯಲಿ
ಮಿಣ್ಣನೆ ನೇಪಥ್ಯಕೆ ಸಾರಿದ
ಮಹಾ ತತ್ತ್ವಜ್ಞಾನಿ
ಜಿಡ್ಡು ಕೃಷ್ಣಮೂರ್ತಿ ಮಹೋದಯಂ
ಮನು ಕುಲವಂ ನೇರ್ಪಡಿಸೆ
ಸಾರಿ ಸಾರಿ ಹೇಳಿದ ವಿಚಾರಧಾರೆ
ಲೋಕ ಪ್ರಖ್ಯಾತಿ ಕಣ!
ಶತ ಶತಮಾನಗಳ ರಜೋಗುಣ
ಮುಂಬೆಳೆದು ಪ್ರಜ್ಞಾನ ರಾಶಿಯನು
ಮುಚ್ಚಿ ಹೊಸಕುತಿರೆ
ನೋನೋಡಿ ಮನ ಮರುಗಿ ಕರಗಿ
ಜೀವನೀಯ ಕಲೆಯನು ಉಳಿಸಿ
ಸಂಭಾಳಿಸೆ ಸಿಡಿದೆದ್ದು
ಮತಿ ಖಡ್ಗವ ಮಸೆದು ಝಳಪಿಸಿ
ಶಾಸ್ತ್ರಗೀಸ್ತ್ರದ ವಿಪಿನ ವ್ರಾತವನು
ಕಪಟ–ಮೋಸ–ಅನೀತಿ–ಅನ್ಯಾಯ
ಮುಂತಪ್ಪ ಕಂಟಕ ಗುಲ್ಮಂಗಳನು
ಛೇಡಿಸಿ ಛೇಡಿಸಿ
ಶಾಸ್ತ್ರೀಯ ಬೇರುಗಳನು
ಸಮೂಲವಾಗಿ ಅಲುಗಾಡಿಸಿ
ಪಾಂಚಜನ್ಯವಂ ಊದಿ
ಕ್ರಾಂತಿ ಮಂತ್ರವಂ ಲೋಕಕೆ ಬಿತ್ತಿ
ಬದುಕಿಗೆ ಶಾಶ್ವತವನಾರೈದು →

ನಿಚ್ಚ ಸತ್ಯಂ-ಶಿವಂ-ಸುಂದರಂ
ಸಚ್ಚಿದಾನಂದ ಬಂಧುರಂ
ಎಂದೆಂಬ ಘನತರ
ಅನುಭವಂ ಹೃದಯದೊಡ್ಡೋಲಗದಲಿ
ಓಲೈಸಿರೆ ಧರ್ಮಕರ್ಮಸಾರ
ತನನ ತೋಂತನನ
ರಂಗಣ ರಿಂಗಣ ನೃತ್ಯ
ಜಗಕೆ ಅತೀವ ಶಾಂತಿ ಮಂತ್ರ
ಓಂ ಶಾಂತಿ ಶಾಂತಿ ಶಾಂತಿಃ
ಸ್ಮೃತಿ, ಚಿಂತನೆ, ಜ್ಞಾನಗಳ್
ಭೂತಕಾಲೀನ ಸಂಚಿತ ಅನುಭವಮಿರೆ
ಅದರ ನೆರವಿನಿಂ ವರ್ತಮಾನ ಭವಿಷ್ಯಗಳ
ಸಮಸ್ಯೆಗಳಂ ತುಲನೆಗೈವುದು
ಸಹಜಮೆಂದೊಡಂ ಈ ದ್ವಂದ್ವ ವಿಚಾರಮೆ
ಜೀವನೀಯ ಅವ್ಯವಸ್ಥೆಗೆ ಕಾರಣಂ.
ಎಲ್ಲಾ ಕಲೆಗಳ ತಾಯಿ ಜೀವನ ಕಲೆ.
ಇದರ ಮಹತ್ತಂ ಅರಿಯುವೊಡೆ
ಅಗಾಧವಾದ ಚಿಂತನೆ-ಪ್ರಾಮಾಣಿಕತೆ
ಜಾಣತನಗಳ ಸುಸಂಸ್ಕಾರವಿರಲಕ್ಕು.
ಇಂದು ಮನುಕುಲಕೋಟಿ
ಕೊಚ್ಚೆಯಲ್ಲಿನ ಕ್ರಿಮಿ ಕೀಟಗಳವೊಲ್
ಹುಟ್ಟಿ ಸಂದು ಹೋದರೇನು ಭಾಗ್ಯ ?
ಜೀವನ ಕಲೆಯಂತೆಯೇ
ಮಾತುಗಾರಿಕೆಯೂ ಇನ್ನೊಂದು ಲಲಿತ ಕಲೆ.
ವೇದಾಂತ-ತತ್ತ್ವಜ್ಞಾನ-ದೇವರುಗಳ ಮೊಳಗು
ಸೊಗಸು ಮಾತುಗಾರಿಕೆಯಿಂದೆ.

→

ಅನಂತರ ಬಿಳಿಯ ಪುಟದ ಮೇಲೆ
ಕರಿಯಕ್ಕರದ ಚಂದನೆ ಸಾಲು.
ಮನ ಮಥಿಸಿ ಮಥಿಸಿ
ಅರಿವು ಮೂಡಿಸುವುದೆ ಜಾಣತನ
ಎಂಬುದೆ ಪ್ರಖ್ಯಾತ ತತ್ತ್ವಜ್ಞಾನಿಯ ಸಂದೇಶಸಾರ.
ಮನುಷ್ಯ ಹೇಗೆ ಇರಲಿ,
ದೈಹಿಕ ರಚನೆ, ಮಾನಸಿಕ ಪ್ರವೃತ್ತಿ
ಮೇಣ್ ಪ್ರಾಣ ಸಂಯೋಜನೆ ಒಂದೇ
ಎನಲ್ಕೆ ಇಡೀ ಮನುಕುಲ ಒಂದೇ
ನನ್ನ ಜಾತಿ, ನನ್ನ ದೇವರು, ನನ್ನ ಧರ್ಮ
ಎಂಬುದು ಕ್ಷುಲ್ಲಕ, ಅವನತಿಯ ಮುಖ.
ಅಹಿಂಸೆಯ ತತ್ತ್ವದಿಂದೆ ಹಿಂಸೆ ಕೊನೆಗಾಣದು.
ಒಳಿತು–ಕೆಡಕುಗಳ ಪ್ರತಿಮೆ
ನಮ್ಮ ಮನದಲಿ ಸೇರಿ ನೋಂದಣಿಯಾಗುವ
ಮುನ್ನವೇ ಅತ್ತ ಗಮನ ಹರಿಸಿದರೆ
ಅವು ನೋಂದಣಿಯಾಗಲಾರವು.
ಮನುಕುಲಕೆ ಮುಖ್ಯ ಭಯ
ಸಾವು.....ಸಾವು.....ಸಾವು !
ಬದುಕಿನ ಹುಮ್ಮಸಿನ ಹಿಂದೆ
ಸಾವಿನ ಪಾಶ ಬೀಸಿರೆ
ಹೆಜ್ಜೆ ಮುಂದಿಡಲು ಭಯ.
ಸಾವು ಅನಿವಾರ್ಯ–ಬದುಕಿನ
ಅವಿಭಾಜ್ಯ–ಸತ್ಯಾಂಶ ಎಂಬ ಅರಿವು
ಯಾರಿಗೆ ಇರದು ?
ಸಾವಿನ ಭಯವಿಲ್ಲದೆ ಬದುಕುವ ಕಲೆ
ನಿಜವಾಗಿಯೂ ಸ್ತುತ್ಯ ಕಲೆ !
ಮಾನಸಿಕ ಪ್ರತಿಕ್ರಿಯೆಗಳನ್ನು ←

ಅಲ್ಲಿಂದಲ್ಲೆ ಅದುಮಿದರೆ ಅವು ಅಲ್ಲಿಯೇ
ಮುದುಡಿ ಜೀವನದ ಹೊಸ ಕ್ಷಣ
ಆರಂಭವಾಗುವುದು ಸತ್ಯ.
ಅಂದರೆ ಜೀವನ ಮತ್ತು ಮರಣಗಳು
ಒಂದುಗೂಡಿದರೆ ಮರಣದ ಭಯವಿಲ್ಲ.
ಆತ್ಮ–ಪರಮಾತ್ಮ–ಜೀವಾತ್ಮ
ಸಾರ ಸರ್ವಸ್ವ ಅಂಗೈಲಾಡಿರಲು
**Awareness choiceless awareness**
ತಂತ್ರವನ್ನು ಪುಣ್ಯವೇದಿಯಮೇಲೆ ಘೋಷಿಸಿದ
ತೇಜೋಮುಖಿ ಶಾಂತಪ್ರಶಾಂತ
ದಾರ್ಶನಿಕ ಶ್ರೀಕೃಷ್ಣಮೂರ್ತಿ
ಭಾರತ ಜನನಿಯ ಶ್ರೇಷ್ಠ ಪುತ್ರ ಕಣ!
ಪುನರ್ಜನ್ಮ ಅಥವಾ ಪುನರುತ್ಥಾನದ
ಅರಿವು ಪರಿಭಾವಿಸಿ ತಿಳಿವುದಲ್ಲದೆ ಬೇರಿಲ್ಲಂ.
ಮರಣದಿಂದೆ ದೇಹ ನಶಿಸಿದೊಡೆ
ಪ್ರಜ್ಞೆಯ ಪ್ರವಾಹ ಅಳಿಯದು.
ಜನನ ಮರಣಗಳ ಪ್ರವಾಹದೊಂದಿಗೆ
ಪ್ರಜ್ಞೆಯ ಪ್ರವಾಹವೂ ಮುಂದುವರಿಯುವುದು
ಪ್ರಜ್ಞೆಯ ಅಂಗಾಂಗಗಳೆನಿಪ
ಸುಖ–ದುಃಖ–ಆಸೆ–ನಿರಾಸೆ–ರಾಷ್ಟ್ರೀಯತೆ–
ಲೈಂಗಿಕ ಪ್ರವೃತ್ತಿ ಇತ್ಯಾದಿಗಳೆಲ್ಲ
ಜೀವಂತವಿರುವುದರಿಂ ಪ್ರಜ್ಞೆಗೆ ಸಾವಿಲ್ಲ.
ಪ್ರಜ್ಞೆಯ ಪ್ರವಾಹ ಏಕ ಪ್ರಕಾರವಾಗಿ
ಮುಂದೆ ಮುಂದೆ ಸಾಗುವಿಕೆ ದಿಟವೆಂದರೂ
ಅದು ದೇಹವೂ ಅಲ್ಲ; ಮನುಷ್ಯನೂ ಅಲ್ಲ.
ಮುಂದುವರಿಯುವ ಪ್ರಜ್ಞೆಯ ಪ್ರವಾಹದಲ್ಲಿ

→

ನಾನು–ನನ್ನದು
ಎಂಬುದರ ಅರ್ಥ ತಾನಾಗುವುದೇ ಪ್ರಜ್ಞೆ.
ಶ್ರೀ ಕೃಷ್ಣಮೂರ್ತಿಗಳ ಪರಮ
ವಿಚಾರಧಾರೆಯ ಸಾರಾಂಶವಿದಂ ಭಾವಿಸು ಮನವೇ!

—o—

## ಸಗ್ಗದ ವೀಥಿ

ಓವೊ, ಎನಿತಂದವೊ ಸುರಸುಂದರವೀ ವೀಥಿ!
'ಟಾರು' ಬಳಿದಾ ಕಾಳವರ್ಣ;
ಇಕ್ಕೆಲದಿ ರಂಗು ರಂಗಿನ ಗೃಹಗಳ ಶ್ರೇಣಿ;
ಮನೆ ಮನೆಯಲಿ ರಮ್ಯೋದ್ಯಾನ;
ಜಗಜಗಿಸುತಿಹ ವಿದ್ಯುದ್ದೀಪಗಳ ಸರಮಾಲೆ.

ಅಹ, ಬದಿಯಲಿ ಪಥಿಕರ ಗಜಿಬಿಜಿಯ ಕಾಲಾಟ;
ಮಧ್ಯೆ ಜರ‍್ರನೆ ಹರಿವ ವಿವಿಧ
ವರ್ಣರಂಜಿತ ವಾಹನಾದಿಗಳ ಹರಿದಾಟ;
ಇಕ್ಕೆಲದಲಿ ಹಚ್ಚ ಹಸುರಿನ
ಗಗನ ಚುಂಬೀ ದೇವದಾರು ದ್ರುಮಗಳ ನೋಟ!

ಸೂಜಿಯೋಲ್ ನೇರವಾಗಿ ಅಂಕು ಡೊಂಕಿಲ್ಲದೆ
ಹರಿದು ಸರುವರಿಗೂ ಸಮನಾಗಿಹ ಹಾದಿ;
ಲೋಕಮಾನ್ಯರು, ಹಿರಿಯರು, ಬಡವರು ದಿನದಿನಂ
ಓಡಾಡುವ ಸಾರ್ವಜನಿಕ ಬದ್ಧ ವೀಥಿ;
ನಮ್ಮಂತ್ಯಯಾತ್ರೆಯಲಿ ಇದುವೆ ಸಗ್ಗದ ವೀಥಿ!

—o—

# ಗುಲಾಬಿ

ಅವನಿಯೊಳ್ ವರಪೂಜೆಯ ಬಯಸಿ ಸುರ ಸುಮವೆನೆ
ನೈವೆತ್ತಿ ಬಂದವೋಲ್ ನಳನಳಿಸಿ ಹಚ್ಚನೆಯ
ಹಸಿರು ಗಿಡಗಳಲಿ ವರ್ಣವರ್ಣಾಂತು ಅರಳುವ
ತರತರದ ಗುಲಾಬಿ ಸುಮ ಸಮುಚ್ಚಯಂ ನಿತ್ಯ
ಸತ್ಯ ಸುಂದರಂ ನೋನೋಳ್ಪ ರಸಪೂರ್ಣ ದೃಷ್ಟಿಗೆ.
ದಳದಳಗಳರಳಿ ಮೃದು ಕೌಶೇಯ ವಸ್ತ್ರದಿಂ
ಅಲಂಕೃತಮೊ ಎನಲ್ಕೆ ಮಂಜುಳ ಮನೋಹರಂ !
ಹೊನ್ನಕುಂಡದ ಸುತ್ತ ರೇಣುರೇಣುಗಳ್ ನೆರೆ
ಕೋಟೆಗಟ್ಟಿರ್ದವೋಲ್ ಸಾಲು ಸಾಲೈಸಿರಲ್
ಮಿಸುನಿ ರೇಖೆಗಳವೋಲ್ ಸುವರ್ಣ ಸಿಂಗರಂ.
ಕೈಯಿಂದ ಮುಟ್ಟಿದರೆ ಮಾಸುವವೋಲ್ ಸುಕೋಮಲ.
ಮೂಸುವೆನೆನೆ ನಾಸಿಕಮಂ ತುಂಬುವನಿತು ಕಂಪು ;
ನೋಳ್ಪೆನೆನೆ ಕಂಗಳ್ ಕರಗಿ ದ್ರವಿಸುವನಿತು ಸುರ
ಬಂಧುರ.   ಇನಿತು ಅಪೂರ್ವ ಸೃಷ್ಟಿಗೆ ಆವಾವ
ಮೂಲ ವಸ್ತುವೈ ಈ ಜಗದೊಳ್ ತಿಳಿದು ನೋಡಾ !
ಪರಬ್ರಹ್ಮನ ಕಾರ್ಯನಿಷ್ಠೆಯಂ ಮನುಜ ಕೃತಿಗಳ್
ಸರಿಗಟ್ಟಲುಂಟೆ ? ಆವಾವ ಮಾನದಂಡಂ
ಆಳೆಯುಬಲ್ಲುದೀ ಕಮನೀಯ ಕೋಮಲ ಪುಷ್ಪ
ಕೋಟಿಯಂ ? ಅಃ ! ಗುಲಾಬಿ–ಚೆಂಗುಲಾಬಿ–ತ್ರಿಲೋಕ
ಮೋಹನೀಯ ಸಿರಿ ಗುಲಾಬಿ ! ನಿನ್ನುಳಿದಾವ ವರ
ಪೂಜೆ ಸಲ್ಲುವುದೈ ನಿತ್ಯ ದೇವಾರಾಧನೆಗೆ ?
ಕೇಳ್, ಮೊನಚು ಮುಳ್ಳುಗಳ ತಾಣದಿ

→

ಪೂವು ಮೂಡಿದ ರೀತಿಯಂ ಸಂಭಾವಿಸಿ ನೋಡೆ,
ಅರಿವಳಿಕೆಗೆ ಬರುವ ಚಿತ್ತಾರ ಭಾರತ ಸತಿಯರ
ಬಾಳ್ಗಡಲಿನ ಗೋಳೆಂದೊಡೆ ಅಹುದೆನಿಸಲಿದುಂ
ಕವಿವರ್ಯರ ಕಲ್ಪನಾ ವಿಶೇಷಮೇನಲ್ತು!

—o—

## ನಾಸ್ತಿ ಮೇಘ ಸಮಂ ತೋಯಂ

ಧೋ ಧೋ ಸುರಿದುದು ಕುಂಭದ್ರೋಣ ಮಳೆ
ಸಿಡಿಲು ಮಿಂಚುಗಳ ಕೂಡಾಡಿ, ರೋಷ
ಭೀಷಣತೆಯ ಕಾರಿ! ಜಡಿಮಳೆ ಜೀರ್
ಜೀರನೆ ಜಡಿಕುಟ್ಟಿ ಸುರಿದುದು ಒಡಲ್
ರೋಷದಲಿ ಬಿರುಗಾಳಿಯೊಡನಾಡುತ
ಕಾರ್ಗಾಲದ ಕಾರ್ಮುಳಿಯ ಮಾರುವೊಲ್!
ಗಗನದೇಶವೆ ಕರಗಿ ಸುರಿಯುತಿಹುದೊ,
ಕಾದಂಬನಿ ಕಾಲ್ಕುಸಿದು ಬೀಳುವುದೊ
ಎನಲ್ ಭೂಮಿ ಜಲ ರಾಶಿಯಲಿ ತುಂಬಿ
ತುಳುಕೆ, ತೇಲಿದುವು ಮನೆ ಮಠಗಳ್ ನೆಲೆ
ಗೆಟ್ಟು! ಜೀವಕೋಟಿಯು ತರಗೆಲೆಯೊಲ್
ಕೊಚ್ಚಿ ಹೋದುದು ಅರೆ ತಾಸಿನಲಿ.
ಭೂ ಭಾರವ ಕಳೆವವೊಲ್! ಮನೆ ಮಾರು
ಎಲ್ಲಂ ತೊಳೆದು ಜಲವುರಳಿ ಸಾಗಿತು
ನದೀಮುಖವಾಗಿ! ಎಂತಪ್ಪ ಮಳೆಯೊ
ಶಿವನೇ! ನೀನೇ ನಿರ್ದಯಿಯಾಗಿರಲ್
ಇನ್ನಾರ್ ಪಾಲಿಪರಯ್ಯಾ?

—o—

# ಪಂಜೆಯವರು

ಕರ್ನಾಟಕ ಸಾಹಿತ್ಯ ಜಗದಲಿ ನೀನಾದೆ
ಅಚ್ಚಳಿಯದ ನಿತ್ಯ ಜ್ವಲಿಸುವ ನಕ್ಷತ್ರ ಕಣ!
ನಡೆನುಡಿಯಲಿ ಮಡಿಯಾಗಿ, ಸಕ್ಕರೆ ಸವಿಯೊಲ್
ಸವಿಯಾಗಿ ಓಜೆಯನೆ ಓಜೆಗೊಳಿಸಿ ನಿಚ್ಚಂ.
ಕಪ್ಪುರಕೆ ಕಿಡಿಯಿಟ್ಟವೊಲ್ ಬೆಳಗಿ, ಸತ್ಯಮಂ
ಸೌಂದರ್ಯ ಕೂಡಿದವೊಲ್ ತೊಳಗಿ ಬೆಳಗಿ ನಿಂದ
ಸೀಮಾ ಪುರುಷ! ಕಾಲನದಿಯಲಿ ಮುಳುಗಿ ತೇಲಿದಾ
ಮಾನುಷಿ! ತವ ಮುನ್ನಡೆಯ ಹೆಜ್ಜೆಗಳಿಂದೆಮ್ಮ
ನಿಚ್ಚ ನಡೆಗೆ ಮಂಗಳ ಕಾನ್ತಿ ಮೇಣತಿ ಶಾಂತಿ!
ಇಂದಿನ ಯುವ ಪೀಳಿಗೆ ನಿಮ್ಮ ನಡೆಯನುಸರಿಸಿ
ನಡೆದೊಡೆಲ್ಲಿಯು ಕುಂದುಕೊರತೆ ಪೇಳ್? ನಿಜದಿಂ
ಪ್ರಪಂಚ ಜ್ಞಾನ–ವಿಜ್ಞಾನ–ಸುಜ್ಞಾನಾದಿ
ಸುವಿದ್ಯಾ ದ್ರವ್ಯವಂ ನಿರ್ಲಕ್ಷಿಸಿ ಪಿರಿಯರಂ
ದುರ್ಲಕ್ಷಿಸಿ ಕರ್ಮಾಸೆ–ಪೆರ್ಮಾಸೆಗಳಂ ಪೊತ್ತು
ಲೋಕ ಕಂಟಕರಾದೊಡೆ ರಾಷ್ಟ್ರದ ಮರ್ಯಾದೆ–
ಮಾನಗಳ ಗತಿಯೇಂ ಪರಿಭಾವಿಸು ಆಚಾರ್ಯ!
ಈ ಕಾಲಮಾನದಲಿ ನಿನ್ನಂಥ ಮಾನಿಸರ್
ವಿರಳಮಾದುದು ಜೀವನ ಕಾಂತಾರದಲಿ ಎನೆ
ನೀ ನಂಬುವೆಯೋ ಇಲ್ಲವೋ ಹೇ ಆಚಾರ್ಯ!
ನಿಮ್ಮ ಬಾಳಿನ ಸರ್ವಗುಣ ಶಾಂತಿ ಎಲ್ಲೆಡೆಯು
ರಸಕಾರ್ಯಗಳಿಗುಪಮೆಯಾಗುಳಿಯೆ ಎನಿತೆನಿತು
ಪೆರ್ಮೆಯಾನಂದದಿಂ ಸ್ವರಾಜ್ಯದ ಸಂಭ್ರಮವು
ಉಕ್ಕುತಿತ್ತೊ ಕಾವ್ಯರಸ ವೀಣಾ ತಂತ್ರಿಯಂ

→

ನುಡಿಸಿ ತೂರ್ಯವಾಣಿಯುಂ ಮೊಳಗುತಿತ್ತೊ ಅರಿದೊಡೆ
ಒಳ್ಳಿತಯ್ಯ ಆಚಾರ್ಯ! ನಿಮ್ಮುತ್ತಮಿಕೆಯುಂ
ಇಕ್ಷು ರಸವಾಗಿ ಹಾಲ್ಜೇನಾಗಿ ಹರಿಯುತಿರೆ
ಕೀರ್ತಿಪರಿಮಳವಾಸಿಸದೆ ಜ್ಞಾನದಿಂ ಪರಮ
ಕರ್ಮದಿಂ ಸಂಜೀವನವನಾರೈದ ಮಾನ್ಯಂ!
ನಿನ್ನ ನೆನೆದು ಕವಿ ಕಾವ್ಯವಾಣಿಯು ಮೊಳಗಿಸುವೆ
ಭಕ್ತಿಯಿಂ ಹೇ ಸ್ವರ್ಗೀಯ ವರ ಆಚಾರ್ಯನೇ!

—o—

## ಬೇಸರ-ಬೇಸರ

ಎಲ್ಲಿಂದ ನೀ ಬಂದೆಯೊ? ನಿಜದಿಂ
ಜನಮನಂಗೆಡಿಸಿ ಜ್ಞಾನಂಗೆಡಿಸಿ
ನರಕದ ಪುಳುವಾಗಿಸೆ ಬಂದೆಯಾ
ಬೇಸರವೆ? ಆವೊಂದು ಗುರಿಯಿರದ
ಆವ ಉತ್ತಮ ಕೈಂಕರ್ಯ ಬಯಸದ
ಸೋಮಾರಿತನಕೆ ನಾಂದಿ ಹಾಡುವ
ಬೇಸರವು ಮನಗೊಂಡರೆ ಮೈಯೊಳ್
ಪಾಲುಮಾರಿಕೆಯಲ್ಲದೆ ಬೇರೇಂ
ಉಳಿಯಬಲ್ಲುದು ಪೇಳ್? ಬೇಸರಂ
ಎಲ್ಲ ಪ್ರಗತಿಗೂ ಕಿಚ್ಚು ಹಚ್ಚುವಂ!
ಆಸಕ್ತಿಯಂ ಬಡಿದು ಜಡಿ ಕುಟ್ಟಿ
ನಿರಾಸಕ್ತಿಯಂ ಬೆನ್ನು ಚಪ್ಪರಿಸಿ
ಮುಂಬೆಳಸಿ ಜೀವನವ ಕಂಗೆಡಿಸಿ
ಜೀವಶ್ಛವವಾಗಿಸುವ ನಿನ್ನಯ
ಅವತರಣ ಮನುಕುಲಕೆ ಮಿತ್ತು ಕಣ!
ಪೇಸಿಕೆಯ ನಾಚಿಕೆಯ ಹೊಲಸು ಕಣ!

—o—

೧

ಮಿನ್ನೆ ಒಂದಾನೊಂದು ಕಾಲದೊಳ್ ಕೇಳಿರ್ದ
ಕಥೆಯೊಂದನೊರವೆ ಕೇಳಿರೈ ಮಮ ಬಂಧುಗಳಿ!
ಧರ್ಮನಿಷ್ಠೆಯಂ ಎಲ್ಲೆಡೆಯೊಳ್ ವಿರಾಜಮಾ-
ನವಾಗಿರ್ದ ಕಾಲವೆ ಕಾಲಂ!
ಜಗವೆಲ್ಲಂ
ಪುರುಷಿನಿಂ ಪುರುಡಿನಿಂ ಮುಂದೋಡುತಿರಲ್ ಆನ್
ತಾನೆಂದು ಪೈಪೋಟಿಗಿಳಿದಿರ್ದ ಬಲಾಬಲದ
ನೆಚ್ಚು-ಕೆಚ್ಚು ನಿಚ್ಚ ಕಾರಣಂ ಪುರ್ಚಿಂಗೆ!
ಜನಮತಿ ಮಸೆಗತ್ತಿಯೊಲ್ ಹರಿತಮಿರಲ್ ಕೊಚ್ಚಿ
ಕಂಡರಿಸುವ ಸ್ಫೂರ್ತಿ ಅತೀವ ರಾಜ್ಯದಾಹಂ
ಮೇಣ್ ಧನದಾಹಂ ಎದೆಯುಲಿ ತುಂಬಿ ತುಳುಕಿರೆ
ಯುದ್ಧವಾರ್ತೆ ವಿಜೃಂಭಿಪುದು ಕಾಲಯೋಗದಲಿ!

೨

ಭೋರ್ ಭೋರನೆ ನುಗ್ಗತಿಹ ಅಲೆಗಳೋಳಿಯಲಿ
ತತ್ತರಿಸುತ ಮುಂಬರಿಯುತಿರ್ದ ಪೆರ್ ಜಹಜಿನ
ಚಾವಣಿಯ ಮೇಲೆ ನಿಂದಿರ್ದನಾ ಎಳೆಬಾಲ
ಕೆಸಬಿಯಾಂಕಂ. ನೆಟ್ಟದಿಟ್ಟಿಗೆಲ್ಲೆಡೆಗಳಿಂ
ನುಗ್ಗಿ ಬರುತಿದ್ದ ರುದ್ರ ಮನೋಹರ ಅಲೆಗಳ್
ಮೇಲಾಯ್ದು ಬರುವವೊಲ್ ಕಂಡು ಬರುತಿರೆ ಭಯಂ
ಕಾವಳಿಸೆ ಮನಂ ಎಳೆಮೊಗದೊಳೆಸೆದುದು ಭೀತ
ಮುದ್ರೆ ನೀಲಗಪ್ಪಿನವೊಲ್! ಒಡಲ್ ಬಳ್ಳಿಯುಂ
ನಡುಗಿದುದು ತರತರಂ! ಸುತ್ತಲ್ ಅಲೆಗಳೊತ್ತಿ →

ಅಪ್ಪಳಿಸೆ ತುಯ್ಯಲಾಡಿತು ನಾವೆ ಅತ್ತಿತ್ತ.
ಹಾರುತಿದೆ ನಾವೆಯು ಪಟ ಗಾಳಿಯು ಪೊಯ್ಲಿಂದೆ
ಪಟಪಟನೆ ಸದ್ದುಗೈಯ್ಯುತಿತ್ತೆಡೆವಿಡದೆ. ಆಹಾ!
ಚಳಕು ಪಳಕೆಂಬ ಮೀಂಗಳಾಟಂ; ತೆಕ್ಕನೆಯೆ
ಅವುಗಳೆಗೆರಗುವ ವಿವಿಧ ಜಲ ಪಕ್ಷಿಗಳ ಬೇಟಂ.
ಚಳಕ್ಕನೆ ಜಿಗಿವ ಪೆರ್ ತಿಮಿಂಗಿಲಗಳ ಅಂದ
ಚೆಂದಂ; ಮತ್ತಾ ಚಿಣ್ಣ ಮೀಂಗಳ ಜೆನ್ನಟ್ಟಿ
ತಿಂಬುದಂ ನೋಡುತಿರೆ ಸುಖದುಃಖಗಳ್ ಎದೆಯು
ಗೂಡಿನೊಳ್ ಒಂದಾದುದಾ ಚಣದಲಿ. ಪಯಣದಿ
ತಾನೊರ್ವ ಎಳೆಯನಿರ್ದು ಆಟವಾಡಿ ನಲಿಯಲ್
ಸಮಾನಸ್ಕಂದರಿರದಿರೆ ಯಾನವೇ ಬೇಸರಂ.
ದೂರ ದೂರ ಸಾಗಿದುದಾ ಮಹಾ ಚೈತ್ರ ನೆರೆ
ಸಾಸದಿಂ ಅಲೆಗಳೋಳಿಯಲಿ ಮುನ್ನುಗ್ಗಿ ಕಲಿ
ಭೀಮನಂ ತಾ ಹೋಲಿ! ಬಾಲ ಕೆಸಬಿಯಾಂಕಂ
ಕಣ್ಬಿಟ್ಟೆ ನೆಟ್ಟು ಭೋರೆಂದು ಭೋರ್ಗರೆವ ಜಲ
ರಾಶಿಯೀ ಎಣೆಯಿಲ್ಲದಾಮೋದವೀ ನಿತ್ಯ
ಚಿರಂತನ ಯಾತ್ರೆಯೀ ಲೋಕ ಕಲ್ಯಾಣವೀ
ಪರಮ ಮಂತ್ರವೀ ಭವ್ಯ ಪಾತ್ರವೀ ವಾರ್ಧಿಯ
ಪಾರವಿಲ್ಲದ ವ್ಯವಹಾರಮಂ ನೋಡುತಿರೆ
ಎಳೆಯ ತನು ಮನ ಪ್ರಾಣಗಳ್ ಮಂತ್ರಮುಗ್ಧಂ.

೩

ನೌಕೆಯ ಇಕ್ಕೆಲಗಳಲಿ ಜಲ ಮುತ್ತುಗಳ್ ಹಾರಿ
ಜರ್ರನೆ ಜಲಧಿಯಲಿ ಬೆರೆತು ಮತ್ತೆ ಮುತ್ತೈಸುವ
ಕಾರ್ಯಕಾರಣ ವೈಖರಿಯಲಿ ಮನವಿಟ್ಟಿರಲ್
ಕೆಸಬಿಯಾಂಕಂ ಕಂಡನೊಂದು ನೌಕೆಯನು ದೂರ
ದೂರದಲಿ. ಆಗಳಾ ಬಾಲಕಂ ತಂದೆಯಂ

→

ಕರೆದು ತೋರಿದನಾ ನೌಕೆಯಂ. ನೋನೋಡುತಿರೆಯಿರೆ
ಸಮಿಾಪಿಸಲಾ ಜಹಜು ಶತ್ರುಗಳದೆಂದರಿತು
ಮನಗತಿಯಲಿ ಮೂಡಿದ ಗಲಿಬಿಲಿಯನೇನೆಂಬೆ ?
ಭಯ ಭೀತಿಯು ಗಾವರದೊಳ್ ತಂದೆ ಕುವರಂಗೆ
ಎಂದನೆಂತೆನೆ "ಎಲೆ ಮಗನೇ ! ಶತ್ರು ನೌಕೆಯಿದು
ದಿಟಂ. ಇನ್ನು ಕಾಳೆಗಕೆ ಕಾಲ್ಕೆರೆದು ನಿಲ್ವರ್
ನಾವ್ ಪೋರದೆ ಬೇರೆ ಗತಿಯಿಲ್ಲಂ. ಈಗಳಾಂ
ಕೆಳಗಿಳಿದು ಶತ್ರುಗಳ ಪೊಯ್ಯು ಬಡಿದು ನರಕಕೆ
ಕಳಿಸದಿರೆ ಎಮಗಕ್ಕು ಗಂಡಂ ! ಎನುತಿಳಿದಂ
ಏಣಿ ಮೆಟ್ಟಿಲಂ. ತಳಭಾಗದಲಿ ಎಲ್ಲರುಂ
ಒಟ್ಟಯಿಸಿ ಶತ್ರುಗಳ ಮೇಲೆ ಬಾಣಗಳ ಸರಿ
ಸುರಿಸಿ ಕಾದಾಡಿದರ್. ಆದೊಡಂ ಬಹು ಜನರ್
ಇರ್ದ ಶತ್ರು ಜನರ ಕೈ ಮೇಲಾಗಿ, ಇತ್ತಣಂ
ಬಲ ಕುಗ್ಗಿ ಸೋಲ್ತು ನೆಲಕ್ಕೊರಗಿದರ್ ಅಸು ತೆತ್ತು.
ಅಲ್ಲಿಗುಂ ತಣಿಯದ ಶತ್ರು ಜನರ್ ಕೆಚ್ಚಿನಿಂ
ರೋಷದಿಂ ಕಿಚ್ಚಿಟ್ಟರ್ ಜಹಜಿಗೆ
ಆಗಳ್
ಕಳೆದುಳಿದ ಕೆಲಮಂದಿ ಪ್ರಾಣ ಭಯಭೀತಿಯಿಂ
ತೆಕ್ಕನೆಯೆ ದೋಣಿಯನಿಳಿಸಿ ಜಲಧಿಗೆ ಮಿಣ್ಣನೆ
ಪಾರಾಗುವ ಸಜ್ಜಿನಲಿರಲ್ ಬಾಲಕ ಕೂಗಿ
ಕೇಳಿದನ್ "ತಂದೆಯೆ ಎಲ್ಲಿರುವೆ ? ನಾನಿಳಿದು
ಕೆಳಗೆ ಬರಲೇ ?" ಅದಕ್ಕೋರ್ವನುತ್ತರಿಸಿದಂ,
"ಮಗುವೆ ! ಈಗಳ್ ಹೇಳಿ ಕೇಳಿ ಸಮಯಮಿಲ್ಲಂ.
ನೀ ಕೆಳಗಿಳಿದು ಬಾರೈ, ದೋಣಿ ಇಳಿಯುತಿದೆ ಮಾ
ಸಾಗರಕೆ, ನಾವ್ ಕೂಡಲೇ ಪಾರಾಗಲಕ್ಕು !"
ಆ ನುಡಿಯನಾಲೈಸಿದ ಕೆಸಬಿಯಾಂಕಂ ಮತ್ತೆ

ಕೂಗಿದಂ "ತಂದೆಯೆ, ಕೆಳಗಿಳಿದು ಬರಲೇ ?" ಆ
ಪ್ರಶ್ನೆಗುತ್ತರಿಸಲಿಕ್ಕೆ ತಂದೆ ಬದುಕಿದ್ದರಷ್ಟೆ ?
ಅದನರಿಯನಾ ಮುಗ್ಧ ಕೆಸಬಿಯಾಂಕಂ ಇಳಿದು
ಬಾರದಿರೆ ದೋಣಿಯಿಳಿಸಿದ ಜನರ್ ಜಹಜಿನಿಂ
ಪಾರಾದರ್. ಮತ್ತಾ ಜಹಜಿನಲಿ ಕಿಚ್ಚಿನ
ಜ್ವಾಲೆ ಧಗಧಗಿಸಿ ಮೇಲೆದ್ದುದು ಕೆನ್ನಾಲಿಗೆ
ಚಾಚಿಚಾಚಿ ಬಾಲಕನೊರ್ವ್ನ ಸುತ್ತಮುತ್ತಲ್
ನೋಡಿ ಕೂಗಿದಂ "ತಂದೆಯೆ ಕೆಳಗಿಳಿದು ಬರಲೆ ?"
ದೈನ್ಯವಾಣಿ ಮೊಳಗಿಸಿದಾಗಲ್ತೆ ಡೆಕ್ಕನ್ನೆ
ಆವರಿಸಿ ಕಬಳಿಸಿತು ಅಗ್ನಿಜ್ವಾಲೆ ಕಂದನ
ಸಹಿತ. ಬಾಲಕಂ ತಂದೆಯಪ್ಪಣೆಯಂ ಬೇಳ್ದು
ಪ್ರಾಣಮಂ ತೆತ್ತಂ. ಚಣಾರ್ಧದೊಳ್ ನಭವೇರ್ದು
ಸ್ವರ್ಗದ ಮಹಾದ್ವಾರದಲಿ ಸಂಧಿಸಿ ಪಿತನಂ
ಪಡೆದನಾತ್ಮಶಾಂತಿ ಕವಿಕಗ್ಗ ರಸಪಾನಕೆ
ತಾನಾಗುವವೊಲ್ ಬಿತ್ತು !

—o—

## ಜಗನ್ಮಾತೆ

ಭವ್ಯ ಭವತಾರಿಣಿ ಜಗನ್ಮಾತೆಯು
ಮಾತೃಲೀಲೆಗೆ ದೀಕ್ಷೆನಿಂತವೊಲ್
ತ್ರಿಶೂಲಧಾರಿಣಿಯಾಗಿರಲ್, ನೋಡು !
ದಿವ್ಯರೂಪು ಮೆರೆದಿದೆ ಕಣ್ಮುಂದೆ !

—o—

# ನಾಳೆಯು ರಾಣಾರಂಪ

ನಾಳೆ–ನಾಳೆ–ನಾಳೆ–ನಾಳೆ!
ನಾಳೆ ಮಾಡುವೆ ಎಂಬುದು
ಇಂದಿನವರ ಮಂತ್ರ ತಂತ್ರ.
ನಾಳೆ ಎಂಬುವವರ ಮನೆ-ಮನ ಎರಡೂಹಾಳು!
ನಾಳೆಯು ನೇಮಃದಲಿ
ಇಂದಿನ ಕಾಯಕವ ನಾಳೆಗೆ ತಳ್ಳಿ
ಜೀವನ ಜೋಕಾಲೆ ಹೊಡೆದು
ಕಂಡರೂ ಕಾಣದವೊಲ್
ಕಣ್ಮುಚ್ಚಿ ಕಾಲ ಕಳೆವವರ ಪರಿಪಾಡಿಗೆ
ಮರ್ಮರ ಮರುಗುತಿಹುದೆನ್ನ
ಮನಃಚಿತ್ತ ಕಾಂಡ.
ಆ ನಾಳೆ ನಮ್ಮ ಕೈಗೆಟುಕದೆಯೇ
ನಾಳೆ ನಾಳೆ ನಾಳೆಯಾಗಿಯೇ
ಮುಂದುವರಿಯುತಿದೆ ಮರೀಚಿಕೆಯಾಗಿ!
ನಮ್ಮಲ್ಲಿ ನೋಮಾರಿತನ
ಮುಂಬೆಳೆಯುತಿದೆ ಪೆಡಂಭೂತವಾಗಿ!
ಇಂದು–ಈಗ ಎಂಬುದು ಹುರುಪು.
ನಾಳೆ ಎಂಬುದು ನಾರುವ ನರಕ.
ಇಂದೇ ಗೈವಾ ಸಂಕಲ್ಪ ದೊಡ್ಡದು;
ನಾಳೆಗೆ ದೂಡುವಾ ಕೃತಿ ಕೈಗೂಡದಾ ಹುಸಿ.
ಸಮಯ ಪ್ರಜ್ಞೆಯರಿತು
ಕಾಲಧರ್ಮವ ಬೆನ್ನಟ್ಟಿ ಗುರಿ ಮುಟ್ಟಿರೊ
ಕಲಿತನದ ಹುಮ್ಮನಲಿ!

—o—

# ಅಣು ಸಮರ

ಅಣು ಸಮರಕೆ ಸಿದ್ಧಮಿಹ ಅದ್ಭುತ ರಾಷ್ಟ್ರಗಳ
ಪೈಪೋಟಿ ಏಂ ಭೀಕರ ಭೀಷಣಮಾ ಲೋಕ
ಜೀವನಗತಿಗೆ ? ಮಿಳ್ತು ಮಾರಿಗೌತಣಮಿಕ್ಕುವ
ದುರ್ಯೋಜನೆಗೇನೆನಲಕ್ಕುಮೊ ಸಿರಿರಮಣನೆ !
ಕಡು ಗೋಳಿನಾ ಪ್ರಾಣಸಂಕಟದ ನರಳಾಟ
ನಿಡುಗಂಬನಿಯ ಕಡಲು ಎಲ್ಲೆಡೆಯುಂ ಕಾಣುತಿರೆ
ಎಂತು ಜನ ಸೈಪರೋ ಇನ್ನೆಂತು ರಾಷ್ಟ್ರಗಳ
ಸಂಬಾಳಿಪರೊ ಪೇಳೊಡೆಯಾ !
                                        ಮಾನವರಾಗಿ
ಸಂಜನಿಸಿ ಮಾನವೀಯತೆ ಅಲ್ಲದೊಡೆ ಎನಿತು
ನಷ್ಟಮೈ ತ್ರಿಲೋಕಕೆ. ಮನುಜಂ ಮನುಜಂಗೈವ
ಘೋರಾತಿಘೋರ ಅಪರಾಧಮಂ ಪುಲಿ–ಸಿಂಹ
ಮುಂತಪ್ಪ ಕ್ರೂರ ಮೃಗಗಳೇಂಗೈದಪುವು ಪೇಳ್ !
ಲೋಕಕಲ್ಯಾಣಮೆಸಗುವುದೆ ಮಾನವ ಧರ್ಮ.
ಅದಂ ಕೈವಿಟ್ಟು ಕಗ್ಗೊಲೆಗೈವುದು ಸಾಮಾನ್ಯ
ಅಪರಾಧಮೆ ಪೇಳ್ ! ಇಂದಿನೀ ನಾಗರಿಕ
ಕಾಲಮಾನದ ಜಾಗತಿಕ ಪ್ರಜ್ಞೆಯುಂ ಮೂರ್ತ
ರೂಪಮಾದ ಕಾಲಮಾದೊಡಂ ರಣದಾಹ !
ಛಿಃ ! ಎಂತಹ ಹೇಯಾತಿಹೇಯಮೊ ಈ ಪರಿಯ
ರಣದಾಹ ! ಕೈಯಾರೆ ಮನವಾರೆ ಕಡುದುಃಖ
ಸಂಕಟವ ತಂದಿಕ್ಕುವರೇಂ ಜೀವನ ಗತಿಗೆ ?
ಕಣ್ಣಿರ್ದು ಅರಿವಿರ್ದು ಕೊಲೆಗೈವ ಮಾನವರ
ರಣದಾಹಕೇನೆಂಬೆ ? ನಾಯೋಲ್ ನರಿಯೋಲ್

→

ಮೃಗೀಯ ದುಷ್ಟಪ್ರವೃತ್ತಿಗೆಣೆಯೇ ಇಲ್ಲ
ಈ ಲೋಕದೊಳ್.

ಓ ಭಗವನ್ ! ಇದ ನೀನೆಂತು
ಸೈಪೆಯೋ ಈ ಪರಿಯ ಧೂರ್ತ ಜನಜಂಗುಳಿಯ
ಪರಮಾಣು ಸಮರದಿಂ ಜೀವಕೋಟಿಯುಂ ಅಗ್ನಿ
ಜ್ವಾಲೆಗೆತ್ತ ಕ್ರಿಮಿಕೀಟಗಳವೊಲ್ ಬೋಂಕನೆ
ಪಟಪಟಾಯಮಾನದಿ ಸಿಡಿಸಿಡಿದು ಉರಿದುರಿದು
ಸಾಯ್ವುರಲ್ತೆ ಕೆನ್ನೆತ್ತರ್ ಕಾರಿ? ಹಾ, ಇದಂ
ಎನಿತನ್ನೆಯುಮೊ ಆಪನಿತು ಭಾವಿಸಿ ನೋಡಾ !

ಪಿಂತೆ ಮತಿಗೆಟ್ಟ ಜಾಗತಿಕ ರಾಷ್ಟ್ರಂ ಹಿರೋಶಿಮ
ಮೇಣ್ ನಾಗಸಾಕಿಗಳ ಮೇಲೊಗೆದ ಅಣುಬಾಂಬು
ಆಸ್ಫೋಟಿಸಿ ಗೈದ ಭಯಂಕರ ಅನಾಹುತಂ
ನೆನೆ ಮನವೆ ! ಅಣು ಸಮರದಿಂ ನಾಶ ಹೊಂದಿದಾ
ಬಳಿಕ್ಕಂ ಕಳೆದುಳಿದಿರ್ದ ಜೀವಜಾತಿ ಕ್ರಮೇಣ
ತಾನಪ್ಪುದು ಪೆಣಂ ಎಂಬುದು ಜೀವ ವಿಜ್ಞಾನ !
ಮೇಣ್ ಅಣುಪ್ರಸರಣದಿಂ ಅರಣ್ಯಂ ಸುಟ್ಟುರಿದು
ಪಸಿರ್ ಕಟ್ಟುರಿಯಾಗಿ ತಿನಲಿಲ್ಲದೆಯೆ ನೆರೆ
ಉಪವಾಸದೊಳ್ ಸಾಯ್ವುವೈ ಪ್ರಾಣಿಕುಲ ಮಮ್ಮಲ
ಮರುಗಿ ! ಸುಟ್ಟುರಿವೋದ ಪುಲ್ ಮತ್ತೆ ಚಿಗುರೊಡೆಯೆ
ನೆಲದ ಕಾವು ಆರಿ ತಣಿಯಲಕ್ಕು ಎಂದೆನಲ್
ಏ ಪೇಳ್ವೆನೊ ಈ ಜಗದ ಪರಿಪಾಡು ! ಮೈನೆಣ
ಕೊಬ್ಬಿ, ಕೆನ್ನೆತ್ತರ್ ಕುದಿಕುದಿಯೆ ರಣಮಾರಿಗೆ
ಔತಣಮಲ್ಲದೇನುಳಿದೀತೈ ಧರಣಿಯೋಳ್ ?

ಪರಮಾಣು ಸಮರ ಮತ್ತಂ ವಿಷಾನಿಲ ಸಮರ
ಒಂದುಗೂಡೆ ಎನಿತೆನಿತು ಮುಗ್ಧ ನಿರಪರಾಧೀ
ಜೀವರಾಶಿ ತೆಕ್ಕನೆ ನಶಿಸಿ ಹೋಹುದೈ ಜಗ

→

ಹೃದಯುದ ನರನಾಡಿಯುಂ ಸೀಳ್ವ ತೆರದಿಂ !
ಓವೊ,
ಅಣುಸಮರದಿಂ ದೇಶವೇ ನಾಶ ! ಪ್ರಾಣವೇ
ನಾಶ ! ಏಂ ಹಿರಿ ನಷ್ಟ ? ಏಂ ಸಂಕಷ್ಟ ? ದೈವ
ನಿರ್ಮಿತ ಸ್ವದೇಶಮಂ ವಿನಾಶದ ವಿಕರಾಳ
ಪಥಕೆ ತಳ್ವುದು ಕಣ್ಣಿದ್ದೂ ಕುರುಡುತನಮಲ್ತೆ ?
ಮೈಮರೆತು ಜಗಮರೆತು ಸ್ನೇಹ ಸಂಬಂಧಮಂ
ಕಡೆಗಣ್ಚಿ ಪರಮಾಣು ಯುದ್ಧಕಣಕಿಳಿಯುತಿರೆ
ಮಾನವೀಯತೆಗೆಲ್ಲಿಯ ಬೆಲೆ ? ಮಾತು ಮಾತಿಗೆ
ವಿಶ್ವಶಾಂತಿಯ ಪೆಸರಿಸಿದೊಡೆ ಬಪ್ಪುದೆ ಶಾಂತಿ ?
ಕೋಪ–ತಾಪ–ರೋಷ–ಅಸಹನೆ–ಜಿದ್ದುಗಳಿಂದೆ
ಕಾರ್ಯಕಾರಣ ಮುಸಗಿ ರಾಷ್ಟ್ರರಾಷ್ಟ್ರಗಳಲ್ಲಿ
ಅಶಾಂತಿಯ ಜ್ವಾಲೆ ಎಲ್ಲೆಡೆ ಹಬ್ಬಿ ಧಗಧಗಿಸಿ
ಉರಿಯುತಿದೆ ಕಪ್ಪುರಕೆ ಕಡ್ಡಿಗೀಚಿದವೋಲ್ !
ಭತ್ತದ ಬಣಬೆಗೆ ಅಗ್ನಿಯಂ ಮುಟ್ಟಸಿದವೊಲ್ !
ಹಾ, ಇದಕ್ಕೆಲ್ಲಿಯ ಪರಿಹಾರಮೊ ಜೀವೇಶ !
ಈ ಶತಮಾನದಾದಿಯಲೊಡಮೂಡಿ ಉನ್ನತೋನ್ನತ
ಅಸ್ತಿತ್ವಂಬಡೆದ **League of Nations** ಇರುತಿರಲ್
ವಿಶ್ವಸ್ನೇಹಕೆ. ಮತ್ತಂ ವಿಶ್ವಸಂಸ್ಥೆ ತಾಂ ವಿಶ್ವ
ವ್ಯವಸ್ಥೆಯಂ ಕಣ್ಣೊಳ್ ಕಣ್ಣಿಟ್ಟು ನೋಳ್ಪಾ
ದಾಷ್ಟ್ರ್ಯಮಿರೆ ಮತ್ತಿದೇಂ ಕಂಗಳಿಗೆ ಮಣ್ಣೆರೆಚಿ
ಮಾಯದಾಟವಾಡುತ್ತಿಹರ್ ರಣ ಮಾರಿಗಳ
ಒಡಲ್ ತಣಿಸುವವೋಲ್ ! ಜಿದಾಜಿದ್ದಿನಿಂ
ದೈವ ಸೃಷ್ಟಿಯಂ ಕಿಡಿಸುವರ್ ಮಾನವೀಯ
ದಾರಿದ್ರ್ಯ ಮೇಣ್ ಧರ್ಮ ದಾರಿದ್ರ್ಯಗಳಿಂಗೆ
ಎಡೆಗೊಟ್ಟು ದಾನವಗತಿಯಂ ಮೆಚ್ಚಿ ನೆಚ್ಚಿ !

—o—

# ಮೇ ದಿನಾಚರಣೆ

ಶತಮಾನವೊಂದುರುಳುರುಳಿ ಸಂದು ಹೋಯಿತ್ತೈ!
ಮೇ ಒಂದನೇ ತೇದಿ ಮೂಡಿದ ಮುಹೂರ್ತಮಂ
ಬೆನ್ನಟ್ಟಿ ಬರೆ ಮುಟ್ಟಿ. ಬಡಜನರ್ ದಿನದಿನಂ
ಬಿಡುವಿಲ್ಲದಿನಿತು ದುಡಿದೊಡಂ ಒಡಲ್ ತುಂಬದೆ
ಕಣ್ಣೀರ ಕೋಡಿಯುಂ ಹರಿಯುತಿರ್ದುದು ಕರ್ಮ
ಕಾಂಡ ಚಣ ಚಣಂ ಬಲಿತು. ಧನಿಕರ ಬಿಗಿಮುಷ್ಟಿ
ಘನಿಸಿ ಬಂಡವಳಶಾಹಿ ಮುಂಬೆಳೆಯೆ ಎಲ್ಲಿಯು
ಕರುಣೆ? ಇನ್ನೆಲ್ಲಿಯ ದಯೆ ದಾಕ್ಷಿಣ್ಯ? ಏಗಳ್
ಗುಲಾಮಿಮಾ ಪದ್ಧತಿಯ ಘೋರಾಂಧಕಾರದಲಿ
ಸಿಲ್ಕಿ ನರಳಿ ನರಳಿ ಸುಖ ಶಾಂತಿಗಳಿಂ ನಿತ್ಯ
ವಂಚಿತರಿರೆ; ನೆರೆ ಯೋಚಿಸಿದ ಶೋಷಿತ ವರ್ಗೀಯ
ಬುದ್ಧಿಮಾನ್ಯರ್ ರೋಷದಿಂ ಸಿಡಿದೆದ್ದು ತರ್ಕಿಸಿ
ತಮ್ಮ ತಮ್ಮೊಳ್, ಎಲ್ಲರೊಗ್ಗೂಡಿ ಮುಕ್ತಿಗೆನೆ
ಶಾಂತಿಯುತ ಹೋರಾಟ ಆರಂಭಿಸಿದ ದಿನಂ
ಸಾವಿರದೆಂಟನೂರೆಂಭತ್ತಾರನೇ ಮೇ
ಒಂದನೆ ತೇದಿ. ಚಿಕಾಗೊ ನಗರದ "ಹೇ ಮಾರ್ಕೆಟ್
ಸ್ಕೇರ್"ನಲಿ ಲಕ್ಷಾಂತರ ಶೋಷಿತರ್ ಸೇರಿದರ್,
ತಮ್ಮ ಬೇಡಿಯಂ ಜಗದರಿಕೆಗೆ ತರಲೆಂದು.
ಹಾ! ಆಗಳ್ ಪ್ರಭುತ್ವ ಕೈಕೊಂಡ ಪ್ರತಿಕ್ರಿಯೆ
ಸುಡುಗೋಲಿಯುತ್ತರ! ಢಂ ಢಮಾರನೆ ಸಿಡಿದ
ಗುಂಡುಗಳಿಗೆ ಬಡ ಜನರ್ ಬಲಿಯಾದುದನಿಂದು
ಇತಿಹಾಸ ಪುಟಗಳಲಿ ಗುರುತಿಪುದೆ ಬರ್ದಿಲಂ.
ಅಂದಿಂದಿಗುಂ ಮೇ ಪ್ರಥಮ ದಿನವೆ ಕಾರ್ಮಿಕರ
ಮಂಗಳಾಚರಣೆಯ ಪವಿತ್ರ ದಿನಮಾನ ಕಣ!

## ಸ್ವಪ್ನ ಸುಂದರಿ

ಹಗಲೆಲ್ಲ ದುಡಿದು ಬಳಲಿ ವಿಧವಿಧ ಚಿಂತೆಯುಲಿ
ನೊಂದು ನೀರಾಗಿ ಬೇಸತ್ತು ಪವಡಿಸಿರೆ ಹಳೆ
ಹಳೆಯ ಹರುಕು ಕಂಬಳಿ ಹೊದ್ದು ; ಗೆಳೆಯ ಮರುತನ
ಬಲ್ಮೆಯುಲಿ ಕಿರುಸಂತಸವ ಮನಗೊಳುತ್ತಾನು
ಬಲವಂದು ಕಣ್ಮುಚ್ಚೆ ಆವ ದೈವದ ದಯೆಯೊ
ಚಿಂತೆಯು ಮುಳಿಸಿ ಸುಖದ ಸುಯ್ದಾನವಂ ಮಾಡಿ
ಕರುವಿಟ್ಟ ಸಾಮ್ರಾಜ್ಞಿಯೆನೆ ಸುಸ್ವಪ್ನ ಮಂಜರಿಯು ಪೀಠದಿ
ಪ್ರತಿಷ್ಟಿಸಿ ಸುಖ ಪ್ರದಾನ ಗೈದ ಸ್ವಪ್ನ ಸುಂದರಿ
ಸಾಮಾನ್ಯಳಲ್ತು ! ನೊಂದ ಜೀವಗಳುದ್ಧರಣ
ಮೋಣ್ ಕಿಂಚಿತ್ ಸುಖಾನಂದ ಮೋದವ ನೀಡಿ
ಯಾಮಿನಿಯ ಕಗ್ಗಪ್ಪಿನುತ್ತರೀಯದ ಮೇಲೆ
ರಂಗುರಂಗಿನ ಚಿತ್ರವನು ತೋರಿ ಮನಸೆಳೆದು
ನಿದ್ರಾಂಗನೆಯ ಬಾಹು ಬಂಧನದಲಿ ಬಂಧಿಸಿ
ಮೋಹಿಸಿ ನಲಿವೆ ಹೇ ಎನ್ನ ಸ್ವಪ್ನ ಸುಂದರಿಯೇ !

o o o

ಕನಸು ಕನಸೆ ನನಸಲ್ಲ ! ಅದೊಡದನೆಂದೂ
ಅಲ್ಲಗಳೆಯುಲಾರೆನ್. ಮಮ ಮನಃಚಿತ್ತಗಳ
ವಿಸ್ಮೃತಿಗೆ ಬೆಂದೆದೆಯ ಸಾಂತ್ವನಕೆ ಭವಿಷ್ಯದ
ನನಸಿಗೆ ಕೀರಿಟವಿಡುವ ಮಿಥ್ಯಸ್ವರೂಪಿಣಿಯೆ
ಆದೊಡಂ ನೀನೇಗಳ್ ಬರುತಿರು ಸುಸ್ವಪ್ನದ
ವೇಶದಲಿ ! ನೀನೆನ್ನ ಸಖಿ ! ಸ್ವಾಗತಂ ನಿನಗೆ !

—o—

# ಮಾತು-ಮೌನ

"ಮಾತು ಬಲ್ಲವಂಗೆ ಜಗಳವಿಲ್ಲ"
ಎಂದೆಂಬ ವಿಚಾರ ಸ್ಫೂರ್ತಿಯಾ
ನುಡಿಗಟ್ಟು ಸಾಮಾನ್ಯವಲ್ಲವೈ !
ಮಿನ್ನೆ ಬುದ್ಧಿಮಾನ್ಯರ್ ಕೋದ ನೆರೆ
ಗಾದೆಗಳ್ ಮನುಕುಲಕೆ ಏಗಳುಂ
ಶುಭಾಷಿತಮಕ್ಕು. ಅನನ್ಯ ಅನುಭವ
ಘನಿಸಿ ಬೌದ್ಧಿಕ ಸ್ತರದಲಿ ಪೊದಳ್ದು
ಚಿಮ್ಮಿ ಬಹ ನುಡಿಮುತ್ತು ಅದ್ಭುತ
ವಿಚಾರ ಸಂಹಿತೆ ಪರಿಭಾವಿಸ !
ಓದು–ಬರೆಹ–ಮಾತು ಮಾನವತೆಯಂ
ತೊಳಗಿ ಬೆಳಗುವ ಶಕ್ತಿ ಸಮಸ್ತಂ.
ಓದುವಿಕೆಯು ಪ್ರಾಜ್ಞತೆ ಬರಹದಲಿ
ನಿಖರತೆ ಗಳಿಸಿಕೊಳೆ ನಲ್ ಮಾತಿನಿಂ
ಶುಭ್ರ ಸಂಪನ್ನ ಶಕ್ತಿ ಪ್ರಾಪ್ತಿಯೈ !
ಮಾತು ಬಲ್ಲ ಜಾಣಂ ಮಾತಿನಲಿ
ಇತಿಮಿತಿಯರಿತು ಮೌನ ಭಾರಮಂ
ನಿರ್ವಹಿಸಬಲ್ಲ ಚತುರ ಮತಿಯಿರಲ್
ಮೌನವೇ ಮಾನವತೆಯ ಮುಖ್ಯ ಬೆಲೆ !
**Silence is one great art**
**of conversation** ಎಂದಿದಾರೆ
ಲೋಕ ಮಾನ್ಯರ್. ಸಂಭಾಷಣೆಯಲಿ
ಮಿತಭಾಷಣೆಮತ್ತಂ ಮೌನಗತಿ–
ಯು ವಿಚಾರ ಹೀನಮಲ್ಲಂ. ನಿಚ್ಚ



ಸತ್ಯಾನ್ವೇಷಣೆಗೆ ಮೌನ ಸಹಕಾರಿ
ಮೇಣ್ ಸುಸ್ಪಷ್ಟಂ ಆತ್ಮದ ಹಾದಿ!
ಸತ್ಯಾರಾಧಕನ ಆಧ್ಯಾತ್ಮಿಕ
ಸಾಧನೆಯೊಳ್ ಮೌನಂ ಮಹತ್ತರಂ.
ಎಂಭತ್ತುನಾಲ್ಕು ಲಕ್ಷಕೆ ಮಿಾರಿ
ಮೆರೆವ ಜೀವರಾಶಿಗಳಲಿ ಮನುಜ
ಪ್ರಾಣಿ ಮಾತ್ರಕೆ ಈ ಅಮೂಲ್ಯತರ
ವಾಗ್ಶಕ್ತಿ ನೀಡಿಹನ್ ಪರಬ್ರಹ್ಮ.
ಅರಿತರಿತು ವಾಗ್ಶಕ್ತಿ ಸ್ಫೂರ್ತಿಯುಂ
ಬಿಗಿವಿಡಿದು ಪರಿಶುದ್ಧಗೈಯದೊಡೆ
ನಮಗಲ್ತೆ ಹಿರಿನಷ್ಟ ಜೀವನದಿ ?

—o—

## ಚಿದಂಬರ ಯೋಜನಾ

ಬಿತ್ತರದ ಬಾಂದಳದಲಿ
ಕೌಮುದಿಯು ಹರಡಿರಲ್ ಚಂದದಿ
ಚಂದ್ರಬಿಂಬದೈಸಿರಿಯು
ಜಗತ್ ಮಹಾ ಪಾರಾವಾರ
ಸುಶೋಭೀ ಮಂಗಳಂ!
ಕವಿಕೋಗಿಲೆಯ ಮನಃಚಿತ್ತ
ಕಲ್ಪದಂತರಾರ್ಥಂ
ಅಗಲಗಲ ಮುಗಿಲಗಲ
ಚಿನ್ಮಯಂ ಬಲ್ ಚಿದಂಬರ
ಯೋಜನಾ ವಿಶೇಷಂ!

—o—

# ಸಿಡಿದೇಳಿ !

ಭಾರತ ಭುವಿಯ ಸುಸಂಸ್ಕೃತಿಗೆ ಕರ್ಪು ಬಳಿಯುವ
ಹೇಯ ಕೃತ್ಯಂ ಕರಾಳ ರೂಪದಿ ಅವತರಿಸಿ
ಪಲ್ಕಿರಿಯುತ ಅಕಾಂಡತಾಂಡವ ನೃತ್ಯ ಗೈದಿದೆ
ಧೀಮಂತ ಲೋಕದ ತೆರೆದ ಕಣ್ಗಳ ಮುಂತೆ !
ಪುರಾತನ ಭಾರತವರ್ಷ ವೇದ ಪರಿಮಳವೆರಚಿ,
ಲೋಕದೊಳ್ ಧವಳ ಕೀರ್ತಿಯಂ ತೊಳಗಿ ಬೆಳಗಿ
ಧೀಮಂತ ಪೆಸರಾಂತ ಶ್ರೀಮಂತ ಹಿರಿ ರಾಷ್ಟ್ರ !
ನಯ ವಿನಯ ಸೌಜನ್ಯಗಳಿಂ ಸತ್ಯ ಧರ್ಮದಿಂ
ನ್ಯಾಯ ನೀತಿಗಳಿಂ ದಯೆ ಕರುಣೆಗಳಿಂ ಮೇಣ್
ಆತಿಥ್ಯದಿಂ ಅಮಿತ ಪ್ರಪಂಚ ಪ್ರಸಿದ್ಧಿಯಂ
ಪಡೆದು ಮೆಚ್ಚುಗಳಿಸಿ ಜನರಂ ಆಕರ್ಷಿಸಿದ
ಮಹಾನ್ ಚತುರ ರಾಷ್ಟ್ರ ! ಶಾಂತಿಯಿಂ ಸ್ವಾತಂತ್ರ್ಯ
ಗಳಿಸಿ ಲೋಕ ಕೀರ್ತಿವೆತ್ತ ಅಪೂರ್ವ ಚರಿತ್ರೆ
ಉಳ್ಳ ರಾಷ್ಟ್ರ ಭಾರತ ವರ್ಷ ! ಧರ್ಮದಿಂ ಕರ್ಮದಿಂ
ವೃತ್ತಿಯಿಂ ಸಂವಿತ್ತಿಯಿಂ ಇತರ ರಾಷ್ಟ್ರಗಳಿಗಿಂ
ತೀರ ಭಿನ್ನವಾದ ಪರಮ ರಾಷ್ಟ್ರಂ ಎನೆ ದಿಟಂ.
ಈಗಳೀ ಅನ್ಯಾಯ ಅನೀತಿಗಳವತರಣಂ
ಮನಃಚಿತ್ತಗಳ್ ಬೆರಗುವಡುವನಿತಸಹ್ಯಂ !
ಕಡು ಪಾಪಿಗಳಪ್ಪ ಶತ ಮೂರ್ಖರ್ ಪೆಣ್ಸಲಿಗೆ
ಪೆಣ್ಗೊಲೆ ಪೆಣ್ ಬುದ್ಧಿಗೊಲೆ ಪೆಣ್ ಮಾನಸಗೊಲೆ
ಪೆಣ್ ಶರೀರಾರೋಗ್ಯದ ಕೊಲೆ ಪೆಣ್ ಜೀವನಗೊಲೆ
ಮೇಣ್ ಕಟುತರದ ಪ್ರಾಣ ಹಿಂಸೆಗಳ ಕಾಂಡಂ !
ತಿಳಿದು ನೋಡೆ ! ಭಾರತ ಸಂಸ್ಕೃತಿಯತಿವಿರಿದು

→

ಜಗದೊಳ್! ಒಳಾಂತರದ ಯಾತನಾಮಯ
ಜೀವನಂ ದೇವನೊಬ್ಬ ಬಲ್ಲಂ! ಸ್ವಾತಂತ್ರ್ಯ ದಾರಿದ್ರ್ಯ
ಆರ್ಥಿಕ ದಾರಿದ್ರ್ಯ ಮುಂತಪ್ಪ ಹೀನಾಚಾರ
ದಿನದಿನಂ ಕೊಲ್ಲುತಿದೆ ಹಂತಹಂತದಲಿ ಕಣ!
ಧೂರ್ತ ಶಕ್ತಿಮಾನ್ಯರ ಕೂರ ಪೊಲ್ಲಾಟವಂ
ಸಾಮಾಜಿಕ ಪಿತೃಗಳ್ ಮೇಣ್ ಪ್ರಭುತ್ವಂ ಕಣ್ಣು
ಮುಚ್ಚಿ ನಿಚ್ಚಂ ತೆರೆಮರೆಯಾಟವನಾಡುತಿದೆ!
ಎಚ್ಚತ್ತು ವಿದ್ಯಾವತಿ ಧೀಮಂತ ಮಹಿಳೆಯರೇ ಏಳಿ!
ಸಿಡಿದೇಳಿ! ತೆರೆಮರೆಯ ಘೋರ ನಾಟಕಗಳಂ
ಬಯಲಿಗೆಳೆದು ಜೀವನ ಶಾಂತಿ ಕಂಟಕರ ಜಡಿ
ಕುಟ್ಟಿ ಸೆರೆಮನೆಗೆ ತಳ್ಳಿಸಲ್ ಎದೆಗೆಡದೆ ಮತಿ
ಗೆಡದೆ ದನಿಯೆತ್ತಿ ಧೈರ್ಯದಿಂ! ಏಳಿ! ಸಿಡಿದೇಳಿ!!
ಅನಾಚಾರಗಳ ವಿರುದ್ಧ ಭೋಂಕನೆ ಸಿಡಿದೇಳಿ!!
ಮೂಢ ನಂಬಿಕೆಗಳ ವಿರುದ್ಧ ನೀವ್ ಸಿಡಿದೇಳಿ!
ಯಾವತ್ತೂ ಸರ್ವತ್ರ ಸೆರೆವಾಸಕೆ ತಳ್ಳುತಿಹ
ಶಾಸ್ತ್ರ ಸಂಕೋಲೆಗಳ ವಿರುದ್ಧ ನೀವು ಸಿಡಿದೇಳಿ!
ಹೆಣ್ಣನು ನರಕದ ಕೊಜ್ಜೆಯಾಳಕೆ ತಳ್ಳುತಿಹ
ಒಡವೆ ವಸ್ತ್ರಗಳ ಆಮಿಷವಂ ತಳ್ಳಿ ಆಚೆ!
ರೊಟ್ಟಿ ಆಸೆಯಿಂದೆ ಶುನಕದೊಲ್ ಮನೆಮನೆಯಾ
ದಾಸ್ಯತ್ವಂ ಒಪ್ಪಿಕೊಳ್ಳದಿರ್ ಬಂಧುರಯಾನೆ!
ನಿಚ್ಚ ನಿರ್ಮಲ ಜೀವನವಂ ನಿರಾಭರಣದಿಂ
ಒಪ್ಪಗೊಳ್ಳಿ! ಸಾಮಾಜಿಕ ಹೊಲಸು ಹುಂಬತನ
ತೊಳೆದು ಹೊರದೂಡುವರೆ ಟೊಂಕ ಕಟ್ಟಿ ನಿಲ್ಲಿ!
ನಿಮ್ಮತನ ಉಳಿಸಿಕೊಳೆ ಸರಸತಿ ಮಂದಿರಂ
ಬೊಕ್ಕು ಜೀವನೀ ಕಲ್ಮಶವ ತೊಳೆದು ತೊಳಗುವ
ಹುಮ್ಮನೆಮ್ಮಿ ದೃಢಗತಿಯಿಂ ಮುಂದಿಡಿ ದಿಟ್ಟ ಹೆಜ್ಜೆ!
ವೈಯಕ್ತಿಕ ಸ್ವಾತಂತ್ರ್ಯ ಆರ್ಥಿಕ ಸ್ವಾತಂತ್ರ್ಯ 

ಇಲ್ಲದಿಹ ಬಾಳೊಂದು ಬಾಳೆ ? ಪಿತನ ಸೊತ್ತಿನಲ್ಲಿ,
ಪತಿಯ ಸೊತ್ತಿನಲಿ ಸುತರ ಸೊತ್ತಿನಲಿ ಸಮಪಾಲು,
ಮೇಣ್ ಸರ್ವಸಮಾನತೆಯ ಪಡೆಯೆ ಮುಂದೆಯುದ್ಧ
ಬಾಳಿಗೆ ಬೆಳಕು ತನ್ನಿ ! ಹುರುಪು ತನ್ನಿ ! ಜೀವನ
ಸೌಂದರ್ಯ ಧರ್ಮಸೌಂದರ್ಯ ಸತ್ಯಸೌಂದರ್ಯ
ಉಳಿಸಲು ಮನಸಾ ಶ್ರಮಿಸಿ, ಆಪನಿತು ಶ್ರಮಿಸಿ !
ದೈತ್ಯ ದೈಹಿಕ ಶಕ್ತಿ ಸಾಮರ್ಥ್ಯವ ಎದುರಿಸೆ
ಉಜ್ವಲಿಸಲಿ ನಿಮ್ಮಾತ್ಮ ಶಕ್ತಿ ! ತಡೆಮಾಡದೆ
ಏಳಿ ! ಎದ್ದೇಳಿ! ಸಿಡಿದೇಳಿ ! ಲೋಕ ಮೆಚ್ಚಲಿ
ನಿಮ್ಮಾತ್ಮ ಶಕ್ತಿ ಸಂಪದಮಂ !

—o—

## ಕಪ್ಪಿರುವೆಗಳ ಗುಂಪು

ಅಚ್ಚ ಕಪ್ಪಿನ ಚಂದನೆಯ ಗುಂಪು
ಕಪ್ಪಿರುವೆಗಳ ಕರ್ರನೆಯ ಇಂಪು
ಮುಲು ಮುಲು ಮುಲುಗಾಡುತಿಹ
ಪುಟ್ಟ ಪುಟ್ಟ ಕಪ್ಪಿರುವೆಗಳ ಸುಂದರ ಕೂಟ.
ಒಮ್ಮನ–ಒಕ್ಕೂಟಗಳ ಬಂಧುರದಾಟ
ಕೋಟಿ ಕೋಟಿ ಸಂಖ್ಯೆಯಲಿ
ಸಾಲು ಸಾಲಾದ ಸೈನಿಕ ಶಿಸ್ತಿನಲಿ
ಸಣ್ಣ ಸಣ್ಣ ತಕ್ತಿಗಳ ಹೊತ್ತು
ಹಿರಿದಂಡಿನ ಕಪ್ಪಿರುವೆಗಳು
ಸಡಗರದಿಂದಲಿ ನಲಿನಲಿಯುತ
ಭವಿಷ್ಯಕೆ ಕಾಳನು ಹೊಂದಿಸುತಿವೆ
ಸೋಲಿಲ್ಲದ–ಬೇಸರಿಲ್ಲದ
ಪಿಪೀಲಿಕಾ ಪರಿವಾರದ ಕೂಟ
ಜಾಣಿಕೆಯ ಬಲು ಮೋಹಕ ಭೇಟಿ
ಲೋಕವು ಮೆಚ್ಚಿದ ತಣ್ಣನೆ ಕೂಟ,
ಮಕ್ಕಳು ಮೆಚ್ಚಿದ ಸುಂದರ ಮಾಟ.

# ವಸಂತ-ಗ್ರೀಷ್ಮ

ಗಳಿಗೆ ಗಳಿಗೆಯುರುಳಿ ದಿನದಿನಗಳೆಯೆ ವಾರ್ಷಿಕವಮಾನ
ಕಳೆದುದು ಸುಖವುಂ ಪರವು ಸುಖಗೊಳಿಸಿ ತೋಷದ ಹೊನಲು
ಉಕ್ಕಿ ಹರಿಯೆ, ಮರುಚಣ ದುಃಖವುಂ ದುಃಖಾರ್ತಗೊಳಿಸಿ
ಪಡೆದ ತಾಪಾವೇಶದಲಿ ಮನಃಪ್ರಾಣಗಳ ಮಥಿಸಿ
ಮಥಿಸಿ ಕಡು ಸುಖ ದುಃಖಗಳಾಗರವಾಗೆ ಏಂ ನಿತ್ಯ
ಸುಖದ ಉರುಟಣೆಯೊ ಮತ್ತೇಂ ದುಃಖದ ಕೊನೆಯಿಲ್ಲದತಿ
ಹಗರಣವೊ ಸಣ್ಣ ದೇಹ ತರುವಿನಲಿ ಹೇ ಗುರುದೇವ !
ಬಾಳ್ ಗರಡಿಯೇಕಿಂತುಟು ಜಂಜಡವಿತ್ತುದು ಜೀವ
ಗತಿ ದಿಕ್ಕೆಟ್ಟು, ಮತಿಗೆಟ್ಟು ನುಚ್ಚು ನುರಿಯಾಗುವವೊಲ್ !
ವಸಂತ ಪ್ರಭುವಿನೊಡ್ಡೋಲಗಂ ಮುಗಿಯೆ ಊಷ್ಮನೊಲ್
ಅಗ್ನಿ ಮಳೆಗರೆಯುತ್ತಲೆ ಬಳಿಸಾರಿ ಬರ್ಪ ಗ್ರೀಷ್ಮ ಪ್ರಭು !
ವಸಂತ ಪ್ರಭು ಓಲೈಸಿರ್ದ ಪಚ್ಚವನವಾರ್ಧಿಯ ಶುಭ್ರ
ಸಿಂಗರಂ ಒಣಗಿ ಸುಟ್ಟುರಿದು ಪೂಗಳುದುರಿ ಎಲೆಗಳ್
ತೊಟ್ಟು ಕಳೆದು ವನಭೂಮಿಯೊಳ್ ಬಿಳ್ದು ವರ ರಂಗೋಲಿ
ಚಿತ್ರವಂ ಚಿತ್ರಿಸಿರ್ದುದು ತರಗೆಲೆ ಕಸಕಡ್ಡಿಗಳ
ನಿತ್ಯ ನೂತನ ಒಗ್ಗರದಿಂ ಪ್ರಕೃತಿ ವೈಚಿತ್ರ್ಯದಲಿ !
ಜನಜೀವನಂ ಒರೆ ಹಚ್ಚಿದೊಡೆ ವಸಂತನ ಮೇಣ್
ಗ್ರೀಷ್ಮನ ಅವತಾರಗಳೆ ನಿತ್ಯದ ಚಿತ್ರಣಂ ಕಾಣ್ !
ಕವಿಮನಃಕಲ್ಪನಾ ಕಾವ್ಯ ಮಂದಿರವ ಕಟ್ಟುವೊಡೆ
ಋತುಗಳೊಡೆಯರ ಛಾಯೆಯಿಲ್ಲದಿರಲಕ್ಕುಮೆ ಭಗವನ್ !

—o—

೧

ಲಂಚಾವತಾರ ! ಲಂಚಾವತಾರ !
ಎಲ್ಲೆಲ್ಲಿಯುಂ ಕಿವಿ ತುಂಬಿ
ಕೇಳಿಬರುತಿಹ ಕಿವಿಗಡಚಿಕ್ಕುವ ಸೊಲ್ಲು !
ಕಡು ನೋವಿನಾಗರವಾದ ಸೊಲ್ಲು
ಅಂದಿಂದಿಗೂ ಬಗೆಹರಿಸಲ್ಬಾರದ,
ಕೊಡುವವರ–ಕೊಂಬುವವರ
ಸರಿಪಡಿಸಲಾಗದ ಮಹಾ ತೊಡರು !
ಒಡೆಯಾ, ಏನೆಂಬೆನಿದರ ಹಾವಳಿ !
ಸಿ.ಬಿ.ಐ. ಧಾಳಿ ಪೋಲೀಸರ ಧಾಳಿ
ಇನ್‌ಕಂ ಟ್ಯಾಕ್ಸ್ ಧಾಳಿ
ಏನೇನು ಅಡ್ಡಗಾಲು ಇರ್ದೊಡಂ
ಲಂಚಾವತಾರ ಮುಗಿಯದು
ಜನರ ಸಂಕಟ–ಸಂಕಷ್ಟ ಹರಿಯದು
ಕಛೇರಿಗಳಲಿ ಮೇಜಿನಿಂ ಮೇಜಿಗೆ
ದಸ್ತಾವೇಜು ಹರಿಯೆ
ಲಂಚವಿಲ್ಲದೆ ಆಗದು–ಮಾಗದು.
ಸಣ್ಣಪುಟ್ಟ ಕೆಲಸಕೂ ಲಂಚವೇ ಲಂಚ !
ಕಾಂಚಾಣವಿಲ್ಲದಿರೆ ಕೆಲಸವ ಮರೆಯಲಕ್ಕು.
ಕೈಯ ಕಾಂಚಾಣವೆ ಎಲ್ಲಕ್ಕೂ ಮುಂದೆ,
ಅನಂತರ ಕಾರ್ಯಕಲಾಪಂ.
‘ಕಾಂಚಾಣಂ ಕಾರ್ಯವಾಸಿ’ ಎಂದು
ಆವ ಮಹನೀಯಂ ಕೋದನೋ ನುಡಿಗಟ್ಟಂ
ಅದು ಎಂದೆಂದಿಗೂ ಅಕ್ಷರಶಃ ಸತ್ಯ ! →

೨

ಜೀವೇಶನೆ! ನಿನ್ನ ಬಳಿಗೆ ಬರುವಂದು
ಒಯ್ದೊಯ್ದ ತರುವೊಡೆಲ್ಲ ಕಾಂಚಾಣಂ
ಅತ್ಯಾಸೆ ಪಡುವುದರಲಿ–ಸಂಗ್ರಹಿಸುವುದರಲಿ
ಅರ್ಥವುಂಟು–ಅಭಿಮಾನವುಂಟು ಕಾಣೆಲೊ!
ದುಷ್ಟ 'ಸಂಗ್ರಹ'ದಾಸೆ ತೀರುವ ಮುನ್ನ
ನಮ್ಮ ಕಾಲಮಾನವೇ ಮುಗಿಯುವುದೆನಲ್
ಮತ್ತೇಂ ಅರ್ಥದಾಸೆಯೋ ಒಡೆಯಾ!
ಗಳಿಸಿದನಿತು ಸಾಲದೆಂಬಾಸೆ.
ಗಳಿಸಿ ಗಳಿಸಿ ಕೂಡಿಡುವಾಸೆ.
ಆವಾವ ರೀತಿಯಲಾದರೂ ಸೈ!
ಕಳ್ಳ ಮಾರ್ಗದಲಿ,
ಅನೀತಿಯ ದುರ್ಮಾರ್ಗದಲಿ
ಗಳಿಸಿ ಗಂಟು ಕಟ್ಟುವೊಡೆ
ತಮ್ಮಾಯುಃಷ್ಯವನೆ ಕಳೆವರೈ ಭಗವನ್!
ಮಾನವೀಯತೆಯಂ ನಿರ್ಲಕ್ಷಿಸಿ
ಆಯುರಾದ್ಯಮಂ ಕಳೆದುಕೊಂಡು
ಉಂಡು–ಕುಡಿದು–ಹದಗೆಟ್ಟು
ಸಲ್ಲುವರು ಸಗ್ಗಕೆ ನೀನರಿಯದೊಲ್ ದೊರೆಯೆ!
ಗಳಿಸಿದುದೆಲ್ಲೊ ತಾವೆಲ್ಲೋ....
ಅನ್ಯಾಯ–ಅನೀತಿಗಳ ಕೆಸರೊಳ್
ಕಾಲ್ಕುಸಿದು ಬಿಳ್ದು ಕೊಚ್ಚಿ ಹೋಗುವಾಗ
ಬಪ್ಪುದು ಗಳಿಸಿದ ಹೇರಾಶಿ ಪಾಪ-ಪುಣ್ಯಮಲ್ಲದೆ
ಅರ್ಥದ ಮೂಟೆಯಲ್ಲ ತಂದೆಯೆ!
ಹಣಕಾಗಿ ಏಕಿಂತು ಬಾಯಿ ಬಿಟ್ಟು
ಲಂಚದ ಹೇಸು ಗಂಟನು ಕಟ್ಟಿ ಡೊಳ್ಳು
ತುಂಬುವರೊ ಅರ್ಥವಾಗದಯ್ಯಾ!



ಲಂಚದೊಳೆ ಅರಮನೆ ಕಟ್ಟಿ
ಅಸು ಅಳಿಯೆ ಮಣ್ಣ ಹುಡಿಯಲಿ
ತಾ ಬೆರೆವರು ಮಣ್ಣಾಗಿ!
ಅರಮನೆಯಿಲ್ಲೆ; ಕಟ್ಟಿದವ ಸಗ್ಗದಲ್ಲಿ!
ಹಣ-ಹಣ. ಹಣಕಾಗಿ ಬಾಯಿಬಿಟ್ಟು
ಗಳಿಸಿದ ಹಣ ಅನ್ಯರ ಪಾಲಿಗೆ!
ಅಂದಮೇಲೇಕೆ ದುರ್ಮಾರ್ಗದಿ ಗಳಿಸುವ
ಆಸೆ ಅಭಿಲಾಷೆಗಳ್ ಎನ್ನೊಡೆಯಾ!
ಹೊಟ್ಟೆ-ಬಟ್ಟೆಗಿದ್ದೊಡೆ ಸಾಲದೇ?
ಇಂತಪ್ಪ ಅನ್ಯಾಯದ ನಿರ್ಮೂಲನೆಗೆ
ಅತ್ಯಾಸೆ-ಅನೀತಿ-ಅಧರ್ಮಗಳ
ಉಚ್ಚಾಟನೆಗೆ ನೀನಲ್ಲದಾರಯ್ಯ
ಸರ್ವಶಕ್ತರು ಹೇ, ತಂದೆಯೆ!
ಈಗೇಂ ಅಡಿಯಿಂ ಮುಡಿಯುವರೆಗೆ
ಎಲ್ಲೆಲ್ಲಿಯುಂ ಲಂಚಾವತಾರವೇ ಕಣ!

೩

ಸರಕಾರಿ ಯಂತ್ರ ಮಾತ್ರವೇಂ?
ಎಲ್ಲ ಸಂಘ-ಸಂಸ್ಥೆಗಳ್, ಪಕ್ಷ-ಪ್ರತಿಪಕ್ಷಗಳ್,
ವ್ಯಾಪಾರ ರಂಗಗಳ್, ಉದ್ಯೋಗ ಕಣಗಳ್,
ದೇವರ ಗುಡಿಗಳ್, ಪಾವನ ಕ್ಷೇತ್ರಗಳ್,
ದೇಶವಿದೇಶ ವಿನಿಮಯಗಳ್,
ವಿದ್ಯಾ ಸಂಸ್ಥೆಗಳ್, ಚಿಕಿತ್ಸಾಲಯಗಳ್
ಎಲ್ಲೆಡೆಯೂ ಲಂಚಾವತಾರವೇ!
ಬಡಮಕ್ಕಳ ಪೌಷ್ಟಿಕಾಹಾರವ ತಾವೇ ತಿಂಬರ್.
ಬರಗಾಲಕೊದವಿದ ಹಣವ ನುಂಗುವರ್.
ಕೆರೆ-ಕಟ್ಟೆ-ಸೇತು-ರಸ್ತೆ-ಕಛೇರಿ ಮುಂತಪ್ಪ

→

ಎಲ್ಲೆಡೆಯು ಹಣ ಅರ್ಥಗಳ್ಳರ ಪಾಲಿಗೆ.
ಸತ್ಯದ ಸ್ಥಾನವಂ ಮಿಥ್ಯೆ ಆಕ್ರಮಿಸಿ
ವಿಜೃಂಭಿಸುತಿಹುದು ಲೋಕಮೋಹಕವಾಗಿ.
ಅನೀತಿ-ಅನ್ಯಾಯ-ಅಧರ್ಮ-ಕೊಲೆ-ಮೋಸ-ರೋಷ
ಎಲ್ಲವೂ ಹಣಕಾಗಿ–ಹಣ ತಿಂಬುವುದಕಾಗಿ !
ಇದಕೇನೆಂಬೆನೊ ಅಯ್ಯಾ !
ಮೂದಿನದ ಬಾಳಿಗಾಗಿ ಏಂ ಪೇರಾಸೆಯೋ !
ಏಂ ಹೀನ ಕೃತ್ಯವೋ ದೊರೆಯೆ !
ಇದಕ್ಕೆಲ್ಲಾ ಏನರ್ಥಂ ? ಸಗ್ಗದಲಿ ಕುಳಿತು
ನೀನೆನಿತು ನಗುವೆಯೋ ಈ ಜನ ಜಂಗುಳಿಯಾ
ದುರಾಸೆ–ದುಷ್ಕೃತ್ಯಗಳಿಗಾಗಿ !
ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ.....
ಎಂದು ಸಾರಿ ಹೇಳಿದ ಮಹಾನುಭಾವನೇ
ಇನ್ನೂ ನೀನೇಕೆ ಅವತರಿಸದಿಹೆಯೋ
ಆನರಿಯೆಂ.....ಇದಕ್ಕಿಂತ
ಇನ್ನೆಂತಪ್ಪ ಸತ್ಯಸಂಕಟ–ಧರ್ಮಕ್ಷಯ
ನೀಂ ಪರಿಭಾವಿಸಿ ನೋಡಾ !
ಕಾಲವಶದಿಂ ಕೆಟ್ಟಿತೆನಲ್
ನಾಲಿಗೆ ಒಲ್ಲದು ಒಡೆಯಾ !
ಕಾಲನದಿ ಬಿಂದು ಬಿಂದುವನೊದ್ದು ತಳ್ಳಿ
ಮುಂಬರಿಯುತಿದೆ ಗತ ವೈಭವವಂ ಮರೆತು
ಇನ್ನೆಲ್ಲಿಯ ಕಾಲಾಧೀನಂ ಪೇಳಯ್ಯಾ !
ಓ, ತಂದೆಯೇ ! ನೀನಂದು ಸೃಷ್ಟಿಯಿದಂ
ನೇಮದಿಂ ಪರಿಜ್ಞಾನದಿಂ ಸೃಜಿಸುವಂದು
ನೆನೆದಿರ್ದೆಯೇಂ ಈ ಪರಿ ಅನ್ನೆಯವುಂ ?
ದೇವ ಮೂರ್ತಿಯ ಮೇಲಿನ

→

ಉತ್ಸೃಷ್ಟ ಪುಷ್ಪ ವೃಂತದೊಲ್
ಗಂದಹೀನವಾದುದೈ ಸುಸಂಸ್ಕೃತಿ!
ಕವಿಮನಃಕಲ್ಪಕ್ಕೊಂದು ಬಿತ್ತಾಗಿ
ಅನನುಭವಿಗಳಿಗೊಂದು ಚಿತ್ತಾಗಿ!

—o—

## ಸೂರ್ಯೋದಯ

ಪೂರ್ವೀ ದಿಗಂತದ ನೀಲನೀಲಿಯ ಲಲಾಟದಲಿ
ಸ್ವರ್ಣದುಂಡೆಯು ಜಗಜಗಿಸುತ ಮೇಲೇರುತಿರೆ,
ಮಂಜುವಾಹಿನಿಯ ಹಿರಿದೆರೆ ಅಡ್ಡೈಸಿ ಬಂದುದು
ತನ್ನ ಪಿರಿ ಪಾತ್ರವ ಪ್ರದರ್ಶಿಪವೊಲ್! ಬಿಮ್ಮನೆ
ಬಂದೌಕಿದ ಮೋಡದ ಮರೆಯಲಿ ಅರುಣ ಕಾಂತಿಯ
ಕಿರಣಗಳ್ ನಿಣುಕುತಿರೆ ಮೋಡದಂಚಿಗೆ ಹೊನ್ನ
ವರ್ಣ ಲೇಪಿಸಿವೆ ತಮ್ಮಿರುವ ಸಾರುವವೊಲ್.
ಅಹಃ! ಏಂ ಮೌನವಿದೇಂ? ಎಲ್ಲೆಡೆಯುಂ ಶಾಂತಿಯಂ
ಆರಾಧಿಸುವವೊಲ್ ಇಳೆಯಲಿ ಬಾನಿನಲಿ ಅಡವಿ–
ಯಲಿ ಎಲ್ಲಿಯುಂ ಸದ್ದಿನ ಸೊಲ್ಲಿಲ್ಲ ನೋಡಾ!
ಕ್ಷೀರದಲಿ ಮಿಸುನಿಯಂ ತೇದು ತೇದು ಕಂಕಣ
ಕಟ್ಟುವ ತೆರಂ ಕನಕ ಕಾಂತಿಯಂ ನೆರೆ ಪರ್ವಿ
ಬಾಲ ಕೋಮಲ ದಿನಮಣಿ ಲೋಕಾಲಯಮಂ
ತೊಳಗಿ ಬೆಳಗಿ ತಾನಾದಂ ಜಗತ್ ಶಿರೋಮಣಿ!

—o—

# ಸಂಸ್ಕೃತ ಜನನಿ

ಪ್ರಪಂಚದ ಪ್ರಪ್ರಥಮ ಪುಣ್ಯ ಪ್ರಭಾತದಲಿ
ಜ್ಯೋತಿರ್ಮಯಿ ಕಿರಣದ್ಯುತಿ ವರ ಚಿರಧವಲ
ಕಾಂತಿಯೆನೆ ಸಕ್ಕದ ಕರಂಡದಿಂ ತುಳುತುಳುಕಿ
ಜಗದೈತಿಹಾಸೀಯ ದೃಷ್ಟಿಗಸ್ಪಷ್ಟವಿರೆ
ಹಿಮ ಪರ್ವತ ಮಹಾ ಶ್ರೇಣೀಯ ಪೃಥುಲೋರುವಿಾ
ಪ್ರೇಂಕದಲಿ ವೇದಶಿಶುವಾಗಿ ಸಂಜನಿಸಿ ಶ್ರೀ
ಮಂಗಲಮಯೀ ಭಾವನೋಜ್ವಲತೆಯಲಿ ಕೊಚ್ಚಿ
ಜ್ಞಾನದೀ ಸಕ್ಕದೀ ಸಕ್ಕರೆಯ ತೊದಲ್ನುಡಿ
ಆರ್ಯಜನನಿಯ ವಾಣಿಯೆನೆ ಮೊದಲೊಡಮೂಡಿದ
ಮೂರ್ತಿ ನೀನೆಲೆ ತಾಯೆ! ಸಂಸ್ಕೃತ ಸಿರಿಭಾಷೆಯ
ಮೋಹಿನೀ, ವಾಗ್ದೇವಿ, ಹೇ ಬಂಧುರ ಜನನೀ!
ನರಜನುಮವೆತ್ತಿರ್ದ ಪ್ರಥಮ ಜೀವಿ ಜಾನದಿ
ಕೊರಳೆತ್ತಿ ಕಣ್ಮುಗಿದು ಕೈಮುಗಿದು ಭಕ್ತಿಯಿಂ
ಸೃಷ್ಟಿಕರ್ತನಂ ಬೇಡುತ ಪ್ರಾರ್ಥಿಸಿದ ವೇದ
ದನಿಯು ನಿನ್ನದಲ್ತೆ ಹೇ, ಸಂಸ್ಕೃತ ಜನನೀ!
ಉಪನಿಷತ್ತಿನ ಮುನಿ ಋಷಿಗಳು ನಿನ್ನ ಓಜೆಯ
ಸಾಗರದಿ ಮುಳುಗಾಡಿ ಪ್ರಥಮ ಪೂಜೆಯ ಸಲಿಸಿ
ಒಲಿಸಿ ನಿನ್ನಯ ಶುಭಾಶೀರ್ವಾದ ವಚನೀಯ
ಸಿರಿಯಲಿ ನೆರೆಮಿಂದು ವಿಚಾರ ವಿಹಾರಂಗೈದು
ಲೋಕೋತ್ತರವಾದ ಉಪನಿಷತ್ ಸಾಹಿತ್ಯವಂ
ವಿರಚಿಸುತ ಜಗದ ಜಂಜಡವ ತೊಳೆಯೆ ಒಮ್ಮತದಿ
"ಏಕಮೇವಾದ್ವಿತೀಯಂ ಬ್ರಹ್ಮ" ವನು ಸಾರಿ
"ತತ್ವಮಸಿ" "ಬ್ರಹ್ಮಾಸ್ಮಿ" "ಸೋಹಂ" ಎಂಬುವ ಮಂತ್ರ



ಕಾಳಿಯಮೂದಿ ಶಿಶು ಮಾನವಂಗೆ ಅಭಯದಾನ
ಮಾಡಿ ಲೋಕಚಿಂತೆಯಾ ದಿವ್ಯ ವೇದಿಯೊಳ್
ಜ್ಯೋತಿರ್ದರ್ಶನಮಿತ್ತರಲ್ತೆ ಸಕ್ಕರೆ ಸಕ್ಕದಿ!
ಉಪನಿಷತ್ ಮಂತ್ರಗಳ ಮಣಿಮಾಲೆ ವಿರಚಿಸಿದ
ಮಹಾ ಋಷಿ ಮುನಿಗಳ್ ಎನಿತೆನಿತು ತವಋಣಿಗಳೊ
ಅನಿತನಿತೆ ಮಹೋನ್ನತ ಪುಣ್ಯವನ ಮಾನಿಷರ್!
ವೈಶಂಪಾಯನ, ಗಾರ್ಗಿ, ಮೈತ್ರೇಯೀ, ಯಾಜ್ಞವಲ್ಕಶಿ
ಮುಂತಪ್ಪ ಮಹರ್ಷಿಗಳ್ ತವ ಸ್ತನ್ಯ ಪೀಯೂಷ
ಪಾನದಿಂ ಮೃತ್ಯು ಸಾಗರಮಂ ಪರಿಲಂಘಿಸಿ
ಅಮರರಾದರಲ್ತೆ ಉಪನಿಷತ್ತಿನ ಮುಖೇನ!
ಅಂತಪ್ಪ ಮಂತ್ರಮಣಿ ಮಾಲೆಗಳಂ ಕೋದೊಡಂ
ತಮ್ಮ ಪೆಸರುಂ ಬೆಳಕಿಗೆ ಬಾರದೊಲ್ ಎಚ್ಚರ–
ವೆತ್ತ ಅನಾಮಧೇಯತೆಯ ಧ್ಯೇಯವನೇನೆಂಬೆ?
ವರರಿಸಿಗಳ್ ಎಂದೆಂದೂ ಎಲೆಮರೆ ಮಿಡಿಯೊಲ್
ದುರಾಶಾಪಾಶ ಹೀನರಲ್ತೇ, ಈ ಜಗದಿ?
ಯುಗಯುಗ ಕಳೆದು ಕಾಲಪುರುಷ ಮುನ್ನಡೆದೊಡಂ
ವಾಲ್ಮೀಕಿ, ವ್ಯಾಸ, ಜೈಮಿನಿ, ವಿಶ್ವಾಮಿತ್ರಾದಿ
ಮಹೋದಯರ್ ನಿನ್ನಾಶ್ರಯದಲಿ ಜಗಕೆಂದೂ
ಸುಪರಿಚಿತ ಶ್ರೇಷ್ಠ ಕವಿ ರಿಸಿಗಳಾಗುಳಿದಿಹರೆನೆ
ಇನ್ನೇಕೆ ವೇದದೊಳ್ ಪೆಸರ್ವಿರಸುವ ಮಮತೆ?
ಓ ತಾಯೆ! ನಿನ್ನಯ ಮಧುರ ಧೀರ ಗಂಭೀರ
ಭಾಷೆಯಕ್ಕರೆಯಲಿ ಕವಿ ಕಾವ್ಯ ರಸವಾಹಿನಿ
ಸ್ರೋತಶ್ರೋತಗಳಾಗಿ ಹರಿಸಿ ಜನಗಣ ಮನದ
ಕಳ್ತಲೆಯ ಪೋಗಾಡಿ. ಹೃತ್ ತಾಪ-ತೋಷಗಳ
ಸೋಸಿ ತವಿಸುತಾನಂದ ವರ್ಷಣವ ಕರೆದೆಯ್ಯೆ.
ಜಗದಲಿ ಬಹುಮುಖ ನಂದನೋದ್ಯಾನದ ಧಾಮದಿಂ
ಮೂಕಮೌನಿಗಳ ನುಡಿಸಿ, ಸ್ವರ್ಣಸ್ವಪ್ನ ವೇಷದಿ →

ಯೋಚನಾ ಕಲ್ಪವಂ ಕಡೆದು ದುಃಖ ಪರಿಧಿಯಂ
ದಾಂಟಿ ಕವಿ ಶಿರೋಮಣಿಗಳಂ ಸೃಜಿಸಿದ ಜನನಿ !
ಕಾಳಿದಾಸ, ಭವಭೂತಿ, ಭಾಸಾದಿ ಕವಿ ರಸ–
ಋಷಿಗಳ್ ವಿಭೂತಿಗಳ್ ವೈಯಾಕರಣಿಗಳ್
ಜ್ಞಾನಿ–ವಿಜ್ಞಾನಿ–ಸುಜ್ಞಾನಿಗಳ್ ವಾಗ್ಗೇಯ
ಕಾರರ್ ತವ ನಿರ್ಜರ ನಿರ್ಝರಣಿಯಲಿ ತೇಲಿ
ನಿತ್ಯ ಲೀಲಾ ಖೇಲನಗೈಯುತಿಹ ಧನ್ಯರ್ !
ಅಂತೆಯೇ ಆರ್ಯ ಕುಲಜರಾವು ತವ ಪವಿತ್ರ
ಸ್ತನ್ಯ ಪೀಯೂಷ ಪಾನವಿಲ್ಲದೆಯೆ ಸುಂದರ
ಬದುಕು ಕಾಂಬೆವೇ ? ನೀನಿಲ್ಲದೆಲ್ಲಿಯು ವೇದ–
ವೇದಾಂತ ? ಸುಸಂಸ್ಕೃತಿಯ ಜೀವನ ಸಂಪತ್ತು
ಪರಮ ಭಾರತ ವರ್ಷದ ಹಿರಿಮೆಯದು ನಿನ್ನಯ
ಹೃತ್ ಕರಂಡದಿಂ ಸಂಜನಿಸಿ ಬಹ ಪುಣ್ಯಜಲ
ತೀರ್ಥದಿಂದಲ್ತೆ ಬೆಳಗುವುದು ನಿತ್ಯ ನೂತನ
ಶೈಲಿಯಲಿ.

ಹೇ, ತಾಯೆ ! ನಿನ್ನ ಲಾಲಸೆಯಿಂದೆ
ಎಲ್ಲ ಶಿಶು ಭಾಷೆಗಳ್ ಮುಂಬೆಳೆದು ಛಂದದಿಂ
ತೊಳಗಿ ಬೆಳಗಲ್ಕೆ ನಿನ್ನ ಸ್ತನ್ಯ ಪೀಯೂಷಂ
ಹರಿಯುತಿರಲೆಂದಿಗೂ ಈ ಧರೆಯಲಿ ಸಹಸ್ರ
ಸಹಸ್ರತರ ಸ್ರೋತಗಳಾಗಿ ; ಶಿಶುವೆಂದಿಗೂ
ಹಸಿದು ನರಳಿ ಕೊರಗಿ ಹೋಹಂದದಲಿ !
ಮಕ್ಕಳಂ ಮುದ್ದಿಸಿ ಬೆಳೆಸುವುದಮ್ಮನ ಕೀರ್ತಿ
ಕತ್ತುರಿ ಪರಿಮಳಿಸಲ್ ಮಾತೃಮಯೀ ತೇಜಸ್ಸು
ಲೋಕೋತ್ತರವಾಗಿ ಬೆಳಗಲಿ, ಪರ ಸಂಸ್ಕೃತಿಯ
ಮೂಳೆ ಲಟಲಟ ಮುರಿವೊಲ್ ಹೇ, ವೇದಮಾತೆಯೆ !
ನೀನೆ ತಾಯಿ ! ನೀನೆ ಸ್ಫೂರ್ತಿ ಕವಯಿತ್ರಿ ರಸಮತಿಗೆ !

—o—

# ಭೋಪಾಲ್ ದುರಂತ

ಸ್ಕ ಸಾವಿರದೊಂಭೈನೂರೆಂಬತ್ತನಾಲ್ಕನೆ ವರ್ಷದ
ಹನ್ನೆರಡನೇ ತಿಂಗಳ ಹದಿಮೂರನೇ ತೇದಿ
ಮಹಾ ಕರಾಳ ದಿನವೈ ಭಾರತ ಇತಿಹಾಸದಲಿ !
ಕಾರಿರುಳ ಕಗ್ಗತ್ತಲೆಯ ಕರಾಳ ರಾತ್ರಿ !
ಜಗವೆಲ್ಲ ಸುಖ ನಿದ್ದೆಯ ಮುಂಪರದಲಿ
ಮೈಮರೆತು ಮನಮರೆತು ಮಲಗಿತ್ತು,
ಸುಖ ಸ್ವಪ್ನಗಳ ಲೋಲುಪ್ತಿಯಲಿ ತೇಲಾಡಿ !
ಭಾರತ ನಭಾಂಗಣದಲಿ
ತಾರಾಲೋಕದ ತಾರಾಳಿ ಇಣಿಕಿಣಿಕಿ
ನೋಡುತಿವೆ ಜಗದ ಜಂಜಡವ
ಕರುಣೆ–ದಯೆದುಂಬಿದ ಕಂಗಳಿಂ !
ಭೋಪಾಲ್ ನಗರಿಯು ಘೋರಾತಿಘೋರ ದುರಂತದ
ದುರ್ಘಳಿಗೆ ಬಳಿಸಾರಿ ಬಂತು !
ಮಧ್ಯರಾತ್ರಿ ಕಳೆದು ಅಭಿಜಿನ್ ಮುಹೂರ್ತ
ಅಡರುತಲಿರೆ ಕಗ್ಗತ್ತಲೆಯ
ಕಾಳ ಕರಾಳಿ ಕುಣಿದಳು ತೇಕಿದಳು
ಕರ್ರನೆಯ ಕೇಶಪಾಶ ಬಿಚ್ಚಿ, ಹುಚ್ಚೆದ್ದು
ಕುಡಿನಾಲಿಗೆಯ ಚಾಚಿ ಚಾಚಿ
ಅತ್ತಿತ್ತ ನೋಡುತ
ಭೈರವ ಮುಹೂರ್ತಕೊಲಿದು ಕಾದಿರ್ದಳ್
ಜನ ಜಂಗುಳಿಯುಂ ತತ್ತಳ ತುಳಿದು
ಹಿಂಡಿ ಹಿಪ್ಪೆಗೈದು ಪ್ರಾಣಮುಂ
ಹೀರಿ ಒಡಲ್ ತುಂಬುವಾಸೆಯಲಿ !

→

ಓಹ್ಹೋ, ಒದಗಿ ಬಂದಿತಾ ವಿಗಳಿಗೆ !
ಕಾರ್ಬೈಡ್ ಕಾರ್ಖಾನೆಯ ವಿಷಾನಿಲದ ಕಡಾಯಿ ಸೋರಿತ
ತೂತು ಬಿದ್ದು ! ಹಾ, ಎಂತಪ್ಪ ದುರಂತ !!
ಭೋಪಾಲ ರಾಜ್ಯ ! ಭೋಪಾಲ ಧಾತ್ರಿ !
ಭೋಪಾಲ ರಾತ್ರಿ ! ಕರಾಳ ರಾತ್ರಿ !!
ಓ, ಭಗವಂತ ! ಏನಾಗಿ ಹೋಯಿತು ?
ಆ ಭೋಪಾಲ ರಾತ್ರಿಯಲಿ !
ವಿಷಾನಿಲಂ ಭೋಂಕನೆ ಸೋರ್ದು
ಗಾಳಿಗಡರಿ ಪರಿಸರವಂ ವ್ಯಾಪಿಸಲಾ ಕಾರ್ಖಾನೆಯ
ಕಾರ್ಮಿಕರ್ ಉಸಿರ್ಗಟ್ಟಿ ವಿಲವಿಲನೆ ಒದ್ದಾಡಿದರ್ !
ಕಂಗಳ್ ಸೋರಿ ರಕ್ತಾಕ್ತವಾಗಿ ಮೂಗು ಬಾಯಿ ಊದಿ
ಉಸಿರ್ಗಟ್ಟಿ ಘೋರ ಘೋರವಾಗಿ ನರಳಿ ಹೊರಳಿ
ಒದ್ದಾಡಿ ಕಂಬನಿ ಸುರಿಸಿ ಕೂಗಿ, ಒಡಲ
ಸಂಕಟವಂ ಕಾರಿ ಭಯಂಕರ ನೋವಿನಿಂ
ಕರುಳ್ ಕೊರೈಸುತಿರೆ ದಿಕ್ಕೆಟ್ಟು !
ಎಲ್ಲಾದರೂ ಓಡಿಹೋಗಿ ಮರಣ ಸಂಕಟವಂ
ತಪ್ಪಿಸಿಕೊಂಬ ಯೋಚನೆಯೊಳ್ ಎದ್ದು ಬಿದ್ದು
ಓಡುತಿರೆ ಅಲ್ಲಲ್ಲೇ ಉರುಳಿ ಬಿಳ್ದು
ಪ್ರಾಣವಂ ತೆತ್ತರಲಾ ಕ್ರಿಮಿಕೀಟಗಳವೋಲ್ !
ಗುಡಿಸಿಲಲ್ಲಿ, ಮನೆಯಲ್ಲಿ, ಅಂಗಳದಲ್ಲಿ,
ಹಿತ್ತಿಲಲ್ಲಿ, ಹಾದಿಯಲ್ಲಿ, ಬೀದಿಯಲ್ಲಿ
ಎಲ್ಲಿ ನೋಡಿದರೂ ಹೆಣಗಳ ರಾಶಿ ರಾಶಿ !
ನಿರಪರಾಧಿಗಳು, ನಿರ್ಬೋಧರು, ಅಮಾಯಕರು
ಲಿಬಿಲಿಬಿ ಒದ್ದಾಡಿ ಪ್ರಾಣವಂ ಬಿಟ್ಟರ್
ಸಹಸ್ರ ಸಹಸ್ರ ಸಂಖ್ಯೆಯಲಿ !
ಸ್ತ್ರೀ ಪುರುಷರ್, ಮಕ್ಕಳು ಮರಿಗಳ್
ವೃದ್ಧಜನರ್ ಪಶುಪಕ್ಷಿಗಳ್ →

ಉರುಳುರುಳಿ ಬಿಳ್ದರು ಅಪರಾತ್ರಿಯಲಿ!
ಸೈಪರಿಲ್ಲಂ; ನೀರು ಕೊಟ್ಟರಿಲ್ಲ; ಸಂತೈಪರಿಲ್ಲಂ.
ಎಲ್ಲರುಂ ಸಗ್ಗದ ಹಾದಿಗಡರಿರೆ
ಸಂತೈಪರಾರ್, ಕಾವರಾರ್?
ಸಂಕಟದ ರಣಗೊಳು–ದುಃಖದ ರಣಗೋಳು!
ಗೋಳು–ಗೋಳು–ಭರಿಸಲಾರದ ಗೋಳು!
ಮನೆಮನೆಯೂ ದುರ್ವಿಧಿ ಬರೆದ
ಘೋರ ಮರಣ ಶಾಸನಕೆ ಒಳಗಾಗಿ ಕಣ್ಣೀರ ಕಡಲಲಿ
ಮಿಂದು ಪ್ರಾಣ ಬಿಟ್ಟರ್ ಸಾಲು ಸಾಲೈಸಿ!
ಶಿವಾಶಿವಾ! ಸಹಿಸಲಾಗದ ಸಂಕಟದಲಿ
ಎಲ್ಲಿದ್ದರಲ್ಲೆ ಕುಸಿದುಬಿದ್ದು ಪ್ರಾಣವಂ ತೆತ್ತರ್!
ಸಹಸ್ರ ಸಹಸ್ರ ಸಹಸ್ರ ಸಂಖ್ಯೆಯೆನೆ
ಸಾಮಾನ್ಯಮೇ ದೇವಾಧಿದೇವ!
ಆರಾರ್ ಆವಾವ ಗುರಿಯಂ ಪೊಂದಿದ್ದರೋ
ಕಣ್ಣೊಳ್ ಕಣ್ಣಿಟ್ಟು ಮೈಮುರಿದು ದುಡಿಯುತ
ಬುದ್ಧಿಯಿಂ ಶ್ರದ್ಧೆಯಿಂ ಆಸೆಯಿಂ
ಬಾಳ ದೋಣಿಯ ಚುಕ್ಕಾಣಿ ಹಿಡಿದಿರ್ದರೋ?
ಶಿವನೇ! ಗುರಿಯೆಲ್ಲೋ, ಜನರೆಲ್ಲೋ?
ಎಲ್ಲರಂ ಒಂದೇ ಬಾರಿಗೆ
ಸಮಾಧಿ ಮಾಡಿದೆಯಲ್ಲೋ ನಿಷ್ಕರುಣೆಯಿಂ!
ಎನಿತೆನಿತು ಮಂದಿ ದಿಕ್ಕೆಟ್ಟು, ಬಾಳ್ಗೆಟ್ಟು
ಕಂಬನಿಯ ಪ್ರವಾಹದಲಿ ಕೊಚ್ಚಿಹೋದರ್!
ಎಂತಪ್ಪ ಘೋರಾತಿಘೋರವೀ
ಪ್ರಕಾಂಡ ಕಾಂಡ!
ಅನುಭವಿಸಲಾಗದ ಸಹಿಸಲಾಗದ
ಬಾಳಿನ ಗೋಳಾಟ!
ಬಡದೇಶದ ಬಡಜನರ್ ಕಣ್ಣೀರ್ ಸುರಿಸಿ →

ಬಡಬಾಗ್ನಿಯಲಿ ಬೆಂದು ಸುಟ್ಟು ಕರಿಮುರಿಯಾದರ್!
ಗುರಿಯಂ ಮುಟ್ಟುವನಿತರೊಳೆ
ಭೋಂಕನೆ ಒದವಿತು ಅಂಕೆಯಿಲ್ಲದ ಸಾವು !
ಸಂಕೆ ಇನಿತಿಲ್ಲದ ರಣಗೋಳು !
ಕ್ರಿಮಿಕೀಟಗಳಿಗೆಂದು ಹೊಂಚಿದ ಸಂಚಿನ ಸಾವು
ಸಂಚಿತರಿಗೇ ಮುಳುವಾಯಿತಲ್ಲ ಸ್ವಾಮಿಾ !
ಕೊಡಲಿ ಕಾವು ಬುಡಕ್ಕೆ ಮೂಲವಾದಂತಾಯಿತಲ್ತೇ
ಕ್ರೂರ ವಿಧಿಯು ದುರ್ದಮನೀಯ ಸಂಚಿನೊಳು.

—o—

## ವನ ಸುಂದರಿ

ಓ, ತಾಯೆ ! ಚಿರಂತನ ಸಖಿಯೆ, ನಿನ್ನೊಡಲಿನಾ
ಹಚ್ಚ ಹಸುರಿನಲಿ ಮುಂಬೆಳೆದಿರ್ದ
ಬೆಳ್ದಳಿರ್ ಕೆಂದಳಿರ್ ಹೊಂದಳಿರ್ ಪಚ್ಚನೆಯ
ಪಚ್ಚದಳಿರ್ ಸುಯ್ಗಾಳಿಯಲೆತಕೆ
ಮೆಲುಮೆಲ್ಲನೆ ತುಯ್ದಾಡುತಿರೆ ಮರ್ಮರ ಶೃತಿಯು
ಮಿಾಟೆ ಹಸುಳೆ ಬಿಸಿಲಿನ ಬೆಚ್ಚನ್ನ
ಸವಿ ಮುದ್ದಿನಿಂ ಮನದೆ ಮುದ ತಾಳಿದೊಲ್ ನಲಿವೆ !
ತಿಳಿ ಬಾಳಿನಲಿ ನಿತ್ಯ ಉದಯು ರವಿ
ಏರುತಿರಲ್ ಪುಣ್ಯಭುವಿಯಲಿ ನೆರಳು ಬೆಳಕುಗಳ
ಚೆಂಬಲೆಯ ರಂಗೋಲಿಯ ನೆಯ್ದು
ಮರ ಬಳ್ಳಿ ಗಿಡುಗಳಲಿ ವರ್ಣರಂಜಿತ ಕುಸುಮ
ಲೋಕವು ಸುರಸೌಗಂಧವ ಬೀರಿ
ಜಗದಿ ಲೋಗರ ಮೇಣಿತರ ಪ್ರಾಣಿ ಸಂಪದವ
ಆಕರಿಸಿ ಕರೆವ ಮನಮೋಹಿನೀ
ವನಸುಂದರಿ ಲೋಕೋಪಯೋಗಿನಿ ನಮೋನ್ನಮಃ !

—o—

# ಬರಗಾಲ

ದಾಹ! ದಾಹ! ಕೊನೆಯರಿಯದ ದಾಹ
ಜಲಕ್ಷಾಮ, ಜಲಕ್ಷಾಮ, ಜಲಕ್ಷಾಮ!
ಕೆಳಗೆ ನೋಡೆ, ಹನಿ ನೀರಿಲ್ಲದಿಹ
ಗಾರು ನೆಲ. ನೆತ್ತಿಯಲಿ ರಣರಣಿಪ
ಸುಡು ಬಿಸಿಲ ಝಳ. ಅತೀವ ಪರಿತಾಪ
ನೀರಿಗಾಗಿ ಕಣ್ಣೀರಿಡುವ ಜನ–
ಪಶು–ಪಕ್ಷಿ–ಪ್ರಾಣಿ ಇತರ ಜೀವಾಳಿ!
ಭಾರತ ವರ್ಷದ ಉತ್ತರ ಭಾಗದಲಿ
ನದಿನದಗಳುಕ್ಕುಕ್ಕಿ ಭಯಂಕರ
ಜಲ ಪ್ರಳಯದಿಂ ಪ್ರಾಣಿ ಕೋಟಿಗಳ್
ನೊಂದು ನೋಯುತಿರೆ ಇತ್ತಲಿತ್ತಿತ್ತಂ
ದಕ್ಷಿಣ ಭಾರತದಲಿ ಅತಿ ದಾಹದ
ಗೋಳು! ವರುಣ ದೇವಂಗೆ ದಯೆ
ಕರುಣೆಗಳಿನಿತಿಲ್ಲದಿರೆ ರಣ ಬಾಳು ಜೀವಿಗೆ!
ಮಳೆ ಬೋರನೆ ಸುರಿದೊಡೆ ಕೊರವಿಲ್ಲ.
ಮಳೆಯೆ ಇಲ್ಲದೊಡೆ ಏಂಗೈಯುಲಕ್ಕು?
ಬಾವಿ ಕೆರೆ ಕೊರೆದು ಬಳಲಿತು ಪ್ರಜಾ
ಸರಕಾರ! ಈಯೊಂದು ಗೋಳಿನಾ
ನಿವಾರಣೆಗಾಗಿ ಉತ್ತರದ ನದಿ–
ಹೊಳೆಗಳಂ ದಕ್ಷಿಣದ ನದಿಗಳಿಗೆ
ಎಲ್ಲೆಲ್ಲಿ ಸಾಧ್ಯವೊ ಅಲ್ಲೆಲ್ಲ
ಬೃಹತ್ ಕಾಲುವೆಗಳ ಮೂಲಕ ತರಲ್
ಸಂಯೋಜನೆ ಹೂಡಿದೊಡೆ ಎರಡೂ

→

ಕಡೆಗೆ ಬಲು ಪ್ರಯೋಜನವುಕ್ಕು, ಎನೆ
ಸಂಭಾವಿಸ್ಯೆ ಪ್ರಜ್ಞಾನ ಮನವೇ!
ಮಲ್ಲಿಕಾ ಮತಿ ಕಾವ್ಯ ಕಾನನಕೆ
ಸೀಮಿತವಿರೆ ವಿಜ್ಞಾನ ದೂರಂ
ಎಂಬುದು ಸುಸ್ಪಷ್ಟಂ. ಕಡು ಭಂಗಕೆ
ಇದೊಂದು ಸಲಹೆ ಮಾತ್ರ ಕಾಣಿರೋ!

—o—

## ರಾಗಿಣಿಯೆ

ಪೂತಮಾಮರದ ಎಲೆ ಗೊಂಚಲ್‌ಗಳ
ಮೇಣ್ ಪೊಚ್ಚ ಪೂ ಮೊಗ್ಗುಗಳ
ಹೊದರಿನಲಡಗಿ ಹಾಡುತಿದೆ ರಾಗಿಣಿ
ಇನಿದನಿಯುಲಿ ಮಧುರ ರಾಗವ
ಭಕ್ತಿಯ ನೇಮದಲಿ ಹರಿಸಿ ತನ್ನಯ
ಚಿಣ್ಣ ಸೇವೆಯಂ ಸಲಿಸಲೆನೆ.
ಅಹ, ಏಂ ರಾಗಭಾವವೋ, ಹರಿಸದ
ಸಲ್ಲಾಪವೋ ಅರಿಯೆ ನಾನೆಲೆ
ಎನ್ನಯ ಮನಮೋಹನ ರಾಗಿಣಿಯೇ!

—o—

# ಶರಾವತಿ

ಸ್ವಾಮಿಾ! ಎನಿತು ಅದ್ಭುತವೊ ತವ ಈ ಸೃಷ್ಟಿ
ಇನ್ನೆನಿತು ಸೌಂದರ್ಯನಿಧಿಯೊ ಈ ನಿಸರ್ಗಂ ?
ಕೆನ್ನೀಲ ನೀಲಯೀ ಗಗನ ತಲದೀ ಪ್ರಕೃತಿ
ಸೌಂದರ್ಯದೀ ನೀಲ ಸೀಮಾಂಚಲದೀ ನವ-
ನವೋ ಮಂಜುವಾಹಿನಿಯು ತಲದೀ ಎಳೆಯ ರವಿ
ಮೆಲ್ಲಸಿಣುಕಲೀ ಭುವಿಯಲಿ ಏಂ ಸಡಗರವೋ,
ಏಂ ದಿನಚರಿ ಅಬ್ಬರವೋ ಹೇ ಎನ್ನೊಡೆಯಾ!
ಮುಗಿಲೋಳಿಗೆ ಚಂದನವೆರಚುವವೊಲ್ ಎಳೆ ರವಿ
ಸುವರ್ಣಮಯೀ ತೇಜದಿಂ ಮೇಲೇರಲ್ ಸಹ್ಯ
ಪರ್ವತ ಪರಿಪೋಷಿತ ಪುಣ್ಯ ತೀರ್ಥ ತರಂಗ
ಭಾವ ಮೋದಿನಿ ತಾಯಿ ಶರಾವತಿಯು ಜಳಜಳ
ರಾಗಮಂ ಪಠಿಸುತ ತಾ ಮುಂದೋಡಿ ಸಾಗರೀ
ಸಂಗಮಕೆ ಆತುರಂಬಟ್ಟವೊಲ್ ಚಣ ಚಣಂ
ನಿಲ್ಲದಾ ಮುನ್ನೋಟಮಂ ನೋಡಾ ಮಮಬಂಧು!
ಶರಾವತಿ ನದೀ ಪಾತ್ರದೊಳ್ ಪುರಾಣೀಯ
ಆಲ, ಹಲಸು, ಶ್ರೀಹೊನ್ನೆ, ಶಾಲ್ಮಲಿ, ದಾಳಿಂಬೆ
ಮಾವು ಬೇವು ಎಲ್ಲಂ ಸಂಬಾರಕೊದವಿದೊಲ್
ವೃಕ್ಷಕೋಟಿಯು ಮಹಾ ಸಂಪದಮೆ ಸಂಪದಂ!
ಓ ತಾಯೆ, ಶರಾವತಿಯೆ! ಹಿಮವೊತ್ತಿದವೊಲ್
ನಿನ್ನಯ ತಣ್ಪಿನಾಗರಂ ಎನಿತೆನಿತು ತನಿಯೋ
ಜೀವರಾಶಿಗೆ ಆನಂದ ರಸಾಯನವಿಕ್ಕಿದವೊಲ್!
ಸಂತೋಷಪೂತ ಮನದಿಂ ಫೇನ ಪುಂಜಮಂ
ಇಕ್ಕೆಲದಲಿ ಪೇರಿಸುತ ಸಾಗುತಿಹೆ ವಾರ್ಧಿಯ

→

ಪಥವಿಡಿದು. ಮುಂದೆ ನಸು ದೂರದಾ ಜೋಗದಲಿ
ನದೀ ಮುಖಕೆದುರಾದ ಪ್ರಪಾತವನೇನೆಂಬೆ ?
ಶರಾವತಿಯ ಮೋದಕೆನೆ ಪೊದಳ್ದವೋಲ್ ಆ
ಪ್ರಪಾತಮೆ ಪ್ರಪಾತಂ ! ಭೋರ್ಗ್ಗರೆದು ಭೋರಿಟ್ಟು
ನುಗ್ಗಿ ಬಹ ಶರಾವತಿ ಪ್ರಪಾತಕೆ ನೆಗೆಯಲಾ
ರಸಕ್ಷಣದಲಿ ಎಂತಪ್ಪ ಆಮೋದವೋ ಎನೆ
ದಿಟ್ಟತನದಿಂ ಮುನ್ನುಗ್ಗಿ ಜಿಗಿಯುವ ಸಾಸವೇಂ ?
ಭೋರ್ಗರೆದು ಮೊರೆವ ಶಬ್ದವೇಂ ? ಆ ಘನ ಘೋರ
ಭೀಷಣ ಗರ್ಜನೆಯೇಂ ? ಹಾ ! ರುದ್ರ ರಮಣೀಯ
ಸೌಂದರ್ಯಶ್ರೀಯಂ ಎನಿತಾಸ್ವಾದಿಸಿದೊಡಂ
ತನುಮನಗಳ್ ತಣಿಯವು ; ಹೃತ್ ಕುಂಡವು ತುಂಬದು
ಎನಲ್ ಬಣ್ಣಿಪುದೇಂ ಭಗವನ್ !

ಪ್ರಾತಃಸಮಯೆ

ಪೂರ್ವೀ ದಿಕ್ತಟದಿ ಚಿಮ್ಮಿ ಬಹ ಸ್ವರ್ಣಕಾಂತಿಯ
ಪ್ರತಿಫಲನದಿಂ ವರ್ಣವರ್ಣಾಂತ ಹನಿ ಮುತ್ತು
ಹೊನ್ನಿನೊಲ್-ನವರತ್ನದೊಲ್ ಚಿಮ್ಮುತಿರಲಾ
ಚಿರ ಸ್ಖಾಲನಾ ವೈಖರಿ ಸ್ವರ್ಗ ಸುಧಾ ಪಾನಂ !
ಅಮಮ ! ಆ ಪರಮ ದೃಶ್ಯಮಾನ ಸೌಂದರ್ಯಮಂ
ಸ್ವಂತ ಕಣ್ಣುಗಳಿಂದೀಕ್ಷಿಸಿದಲ್ಲದರಿಯುವಿಕೆ -
ಕನಸಿನ ಚಿತ್ತಾರದವೊಲ್ ಸಂಪೂರ್ಣ ವ್ಯರ್ಥವೈ.
ಓ ! ಸ್ವಾಮಿ ! ಬ್ರಹ್ಮಾಂಡ ಸೃಷ್ಟಿಯೀ ಅದ್ಭುತ
ಸಂಯೋಜನೆಯೀ ಸರ್ವತ್ರ ತಂತ್ರವೀ ಪರಮ
ಮಂತ್ರವೀ ತ್ರಿಲೋಕ ಸಂಯುಕ್ತವೀ ಪ್ರಾಣ
ವಹ್ನಿಯುಂ ನಿನ್ನಿರುವನಿಂತು ಸಾರುತಿರ್ಪುವು !
ಈ ಮಹಾ ಸೃಷ್ಟಿ ಸಾಮ್ರಾಜ್ಯದಾ ಕಣಕಣಂ
ಅತ್ಯದ್ಭುತ ಸಾಹಿತ್ಯಮಲ್ತೆ ಈ ಜಗದಿ ?
ಶರಾವತಿ ವಾಹಿನಿಯು ಮುನ್ನುಗ್ಗಿ ಪ್ರಪಾತಕೆ →

ದುಮುಕುವೊಡೆ ಆವಾವ ದಿವ್ಯ ದುಃಖ ತಾಪವೊ
ಮೇಣ್ ಜನ್ಮ ನಕ್ಷತ್ರಮೆ ಬೆಂಬೊತ್ತಿ ತಳ್ಳಿತೊ
ದುರ್ಗತಿಯ ಕಂದಕಕೆ ಎನಲ್ ದುಃಖ ತಾಪದ
ಕೊರಳೊತ್ತಿ ಭ್ರಮಂತ ಭ್ರಮೆ ಮುಸುಗುತಿರೆ ಮನಮಂ
ಸುಖಮೂರ್ಛೆಗೆ ಸಂದುದಲಾ ಭಾವನಾಲೋಕಂ!
ಮಹಾ ಜಲಪಾತಮೆ ಜಲಪಾತಂ! ಅಹ, ಘೋರ
ಕಮನೀಯ ಪಾತ್ರ ಜಗದೊಳತಿವಿರಳಮಲ್ಲದೊಡಂ
ಸಂದರ್ಶನೀಯಮಾದ ಅಪೂರ್ವ ಚಿತ್ರಾರಂ!
ಬಂಡೆ ಬಂಡೆಗಳ ಸಂದಿಗೊಂದಿಗಳಲಿ ನುರ್ಗೆ
ಅದ್ಭುತ ಜಲರಾಶಿ ತಾಂ ಸೀಳು ಸೀಳುಗಳಾಗಿ
ನಾಲ್ಪೆಡೆಗಳಲಿ ಧುಮುಕಿ ಬೇರೆವೇರೆ ಭಂಗಿಯ
ಪರಮ ಗಂಭೀರ ಧೀರ ವಿಲಾಸದೀಕ್ಷಣಾ
ಆವೇಶದಿಂ ಮೈಯೆಲ್ಲಾ ಕಣ್ಮನಗಳಾಗೆ
ಆತ್ಮವೇ ದ್ರವಿಸಿ ಹರಿದುದೊ ಎನೆ ಸುಸಂಗತಂ!

ಓವೊ, ಕೇಳಾ ಶರಾವತಿ ನದೀ ಘೋಷಮಂ!
ಸತ್ಯ–ಧರ್ಮ–ಶಾಂತಿ–ಶಿಸ್ತುಗಳ ಸುಯ್ಹಾನಮಂ!
ನಭೋದೇಶದಿಂದಿಳಿತರ್ಪ ಭಾಗೀರಥಿಯೊ
ಮತ್ತಾ ಪವಿತ್ರ ಗಂಗಾದೇವಿಯೊ ಎನಲ್ಕೆ
ಮೈಮನಃಪ್ರಾಣಂ ತಕಥೈ ತಕಥೈ ಪುಳಕಿತಂ!

ನದಿ ಭಾಗಶಃ ಬೀಳ್ವೆಡೆಯ ಧೀರ ಗಂಭೀರ
ಭಂಗಿಯ ಪಿರಿಯ ಧಾರೆಯು "ರಾಜಾ" ಎಂದೆಂಬ
ಅನ್ವರ್ಥ ನಾಮಮುಂ ಪಡೆದಿರಲ್, ದ್ವಿತೀಯ ಜಲ
ಧಾರೆ "ರೋರರ್" ಎಂಬ ಘನವೆತ್ತ ನಾಮಮಂ
ಪಡೆಯಲಾ ತೃತೀಯ ನದೀಧಾರೆ "ರಾಕೆಟ್"
ಎಂಬ ಗಂಭೀರ ನಾಮಧೇಯಮಿರೆ ಚತುರ್ಥ
ಜಲಧಾರೆ ತನ್ನಂಗಿಯೊಲ್ ಬಳುಕುತ ಬೀಳುತೆ →

"ಲೇಡಿ" ಎಂಬನ್ವರ್ಥನಾಮಕನುಗುಣವಾಗಿರಲ್
ಎಲ್ಲಂ ತಂತಮ್ಮ ನಾಮಾವಳಿಗನುಗುಣವೈಸಿ
ವಿಜೃಂಭಿಸುತಿವೆ ಭಾವೋಜ್ವಲತೆಯಂ ಸ್ವತಃ
ಸಾಕ್ಷಾತ್ಕರಿಸಿ. ರಾಜಾ–ರೋರರ್–ರಾಕೆಟ್–ಲೇಡಿ
ಎಂದಾವ ಮಹನೀಯ ಪೆಸರಿಸಿದನೋ ಅದಂ
ಜಾನದಿಂ ಮಾನದಿಂ ಗಂಭೀರ ತುಲನೆಗೈಯೆ
ಅಕ್ಷರಶಃ ಅನ್ವರ್ಥಮೆಂಬುದುಂ ಸುಗೋಚರಂ!

ಪ್ರಾತಃಸಮಯದಿ ಬಾಲ ಭಾಸ್ಕರ ಮೇಲೇರೆ
ನೋಡದೋ ಸಪ್ತವರ್ಣಗಳ ಕಾಮನ ಬಿಲ್ಲು
ಜಲಪಾತದಾ ಸೀಳು ಸೀಳುಗಳ ಮೇಲೆ
ಬಲ್ಮೆಯಿಂ ಬಂದಿಳಿದುದೊ ಎನಲ್ ಶೃಂಗಾರಂ!
ಭೂರಮೆಯ ದಿನ ನಿಚ್ಚದ ವ್ಯಾಪಾರಂ ಸರ್ವತ್ರ ಲೋಕ
ಮೋಹಕಂ, ಅತ್ಯಪೂರ್ವ ಸತ್ಯಶೋಧನಂ!
ಕರ್ನಾಟಕ ರಾಜ್ಯದ ಉನ್ನತೋನ್ನತ ಕಳಸ
ಪ್ರಾಯಮಿಾ ಶರಾವತಿ ಪ್ರಚ್ಛನ್ನ ಜಲಪಾತ
ದೇಶೋವಿಶಾಲಂ ಕೀರ್ತಿ ಪರಿಮಳ ಪ್ರಸರಿಸುವ
ತಾಯಿ ಕಣ! ಶಕ್ತಿ ಕಣ! ನಿರಂತರ ಧಾತ್ರಿ ಕಣ!

ಜಲಪಾತದ ಪಿಂಗಡೆಯ ಕಾರ್ಗಲ್ ಬಂಡೆಗಳ
ಹೆಗ್ಗೋಡೆಯ ಬಿರುಕು ಬಿರುಕುಗಳೊಳಾಂತರದಿ
ನಲ್ ಗೂಡುಗಳಂ ನಿರ್ಮಿಸಿ ದವಸ ಧಾನ್ಯಮಂ
ಸಂಗ್ರಹಿಸಿ ತಂದು ಶೇಖರಿಪ ಸಹಸ್ರ ಸಹಸ್ರ
ಸಂಖ್ಯೆಯಾ ಮುದ್ದು ಪಾರಿವಾಳಗಳ ಸಂಭ್ರಮ
ಚಾತುರ್ಯ–ಚಮತ್ಕಾರಗಳ ಸಾಸ ಕಾರ್ಯಮೆ
ಕಾರ್ಯಂ! ಸುಗ್ಗಿಯಿಂ ಸುಗ್ಗಿಗೆ ಕಾಯ್ದಿರಿಪ ಜ್ಞಾನ–
ಪ್ರಜ್ಞಾನ ಪರಿವೇಶಂ. ಆ ಮಹಾ ಜಲಪಾತದ
ಬೆಂಗಡೆಯಲಿ ದವಸ ಸಹಿತ ನುಸುಳಿ ಪಾರಾಡಿ 

ಗೂಡಂ ಪುಗುವ ಕಾರ್ಯ ಸಾಮಾನ್ಯಮಲ್ತು ಕಣ !
ಮತ್ತಾ ಕಪೋತಗಳಿಗೆ ಹೆಗಲೆಣೆಯೊ ಎನೆ ನರ
ಕುಮತಿಯಾದವಸಮಂ ಸೂರೆಗೊಳೆ ನಡೆಸಿರ್ದ
ಯತ್ನಮಂ ಸುಜ್ಞಾನಿಗಳಾರ್ಭಟಂ ಮುರಿದಿಕ್ಕಿ
ಉಪಕರಿಸೆ ಕಪೋತಕುಲದ ಧಾನ್ಯ ಸಂಗ್ರಹಂ
ಪರರ ಪಾಲಾಗದೆ ಸುಜೀವನ ಸರಾಗಂ !

ಅಹ, ಧುಮುಕುವ ಮಹಾ ಜಲಧಿಯ ಪಿಂಗಡೆಯೆ
ನ್ನೈ ತೊಯ್ಯ್ಯದಂದದಿ ಸರಸದಿಂ ಪಾರಾಡುವ
ಸಣ್ಣ ಆಕೃತಿಯ ಚಮತ್ಕೃತಿ ಭಾವಿಸಿ ನೋಡ !
ಅನುಗಾಲಂ ನಡೆಯುವೀ ಚಮತ್ಕೃತಿ ಕಲೆಗಾರನ
ಚಿತ್ರಕೆ ನ್ಯೈಯಾಂತವೊಲ್ ಏಂ ಅನನ್ಯ ಸತ್ಯ
ಸುಂದರವೊ ಸರಪೂರ್ಣ ದೃಷ್ಟಿಯಾ ದಿವ್ಯತರ
ರಸಾಸ್ವಾದನೆಗೆ ! ಮೇಣ್ ಕಬ್ಬಿಗರ ವರಕಾವ್ಯ
ವಿಹಾರ ಸಂಪದಕೆ ಸದ್ವಸ್ತು ಕಣ ! ರಸಾನ್ನ ಕಣ !

—o—

## ಖೇಸ್ವರ್ಗ

ದೃಕ್ಪಥದ ಆಚೆ ನಿಣುಕಲಾರದ
ದೃಷ್ಟಿ ತಿಣುತಿಣುಕಿ ನಿಲ್ಲಲ್
ಭಾವ ರಥ ಸಾಗಿದುದು ತಾನಾಗಿ
ದೃಷ್ಟಿಯಾಚೆಯ ಪಥಕೆ.
ಭಾವಪಕ್ಷಿ ಗರಿಗೆದರಿ ಹಾರಿದುದು
ನಭೋದೇಶದಲಿ ಸುಳಿಸುತ್ತಿ
ಲೋಕಲೋಕಾಂತರಮಂ ಜೊಕ್ಕು.
ಅನುಭಾವಕೆ ರಸಾನ್ನವನುಣಿಸೆ
ಓ, ಭೂಸ್ವರ್ಗಕೇಂ ಕಡಿಮೆಯುದಲ್ಲ
ದೃಷ್ಟಿಕಕ್ಷೆಯಾಚೆಯಾ ಖೇಸ್ವರ್ಗ !

# ಜಡ ಪ್ರಪಂಚ

ಮುನಿ ಋಷಿಗಳ್ ಕವಿವರರ್ ದಾರ್ಶನಿಕರ್ ಜ್ಞಾನಿ
ವಿಜ್ಞಾನಿಗಳ್ ಸಂಜನಿಸಿ ಜಗದಿ
ಜೀವ ಜಂಜಡವ ಪೋಗಾಡೆ ತನುಮನಗಳಂ
ಮೀಸಲಿರಿಸಿ ಶ್ರಮವನ್ನೇ ಶ್ರಮಿಸಿ
ಬೆವರ್ನೀರ್ ಬಸಿದುದು ಜನಜಂಗುಳಿಯ ಮನಂ
ದಳದಳವರಳಿ, ಧವಳ ಕೀರ್ತಿ ಬೆಳಗಿಸಲೆಂದು !

ಭಗವನ್, ಮಮ ಜೀವನ ಕಾಂತಾರ ಘನ ನಿಬಿಡ
ಮುಳ್ಳು ಕಂಟಗಳ ಅದ್ಭುತ ಬೀಡು !
ಎಂತಪ್ಪ ದಾಷ್ಟ್ರೀಕತನಂ ಸರ್ರನೆ ಪುಗದ
ಮನಮುಂ ಶಿಲಾಕಾಠಿಣ್ಯ ಜಡತ್ವ
ತುಂಬಿಹುದು ಲೋಕ ಕಂಟಕವಾಗಿ ! ಅನುಭೂತ
ಅನಾಗರಿಕ ಅಸಹ್ಯ ಜಡ ಪ್ರಪಂಚ ತಾನಾಗಿ !!

ಕುಶಾಗ್ರಮತಿಗಳ್ ಮೇಧಾವಿಗಳ್ ಒಳ್ನುಡಿಯ
ಸರಿಸುರಿಸಿ ಗೈದಾ ಕಂಠ ಶೋಷಣೆ
ನೀರಿನಲಿ ಹೋಮಗೈದವೊಲ್ ಕಡು ವ್ಯರ್ಥಂ !
ವೇದ ವೇದಾಂತಿಗಳ್ ವಿರಚಿಸಿದ
ಉದ್ಗ್ರಂಥಗಳ್ ಮೇಣ್ ಜಗಚ್ಛ್ರಾವ್ಯ ಕಾವ್ಯಗಳ್
ವ್ಯರ್ಥವೆನೆ ಕುವಿಚಾರ ವಿಜೃಂಭಿಸಿದೆ ಜಗದಿ !

ಸ್ವಾಮಿ ! ಜಗದಚ್ಚರಿಯ ಜಡತ್ವಮಂ ಕೊಚ್ಚಿ
ಕಂಡರಿಸೆ ನೀನಿಲ್ಲದಿನ್ನಾರಿಂ ಸಾಧ್ಯವೈ ?

—o—

# ವರ ಕವಿ ಲಕ್ಷ್ಮೀಶ

ಕಾಲ ನದಿಯಲಿ ತೇಲಿ ಹೋದ ಕವಿ ಲಕ್ಷ್ಮೀಶ
ಕವಿ ಕಾವ್ಯ ಚೂತವನ ಚಾರುಕೀರ್ತಿ. ಕವಿತಾ
ಕಡಲಿನ ತರಂಗರಂಗ. ಕಮನೀಯ ಭಾವಾ
ವೇಶದ ಕವೀರ ಮುನಿ. ಪುರಾಣೀಯ ಕನ್ನಡ
ಕಾಂತಾರದಲಿ ಅರಳಿದ ಮಂದಾರ ಮಲ್ಲಿಗೆ.
ವರಕವಿ ಶಿರೋಮಣಿ. ಕವಿತಾ ಗಮಣೀ ನಾಥ!
ಮತ್ತೆ ಹುಟ್ಟಿ ಬಾರೈ ಕನ್ನಡದ ಕಣ್ಮಣಿಯಾಗಿ
ಹರಿದು ಛಿದ್ರವಾಗಿರ್ದ ಕನ್ನಡ ಸಿರಿದೇವಿ
ಇಂದು ಮೈದುಂಬಿ ನವ ಯೌವ್ವನದ ಐಸಿರಿಯುಲಿ
ಮೆರೆದಿಹಳ್ ಜಗನ್ಮೋಹಿಸಿಯೆ ತಾನಾಗಿ ಕಣ!
ಆದೊಡಂ ಮುಂದಿಡುವ ಪಜ್ಜೆ ಪಜ್ಜೆಯಂ ಜಡಿ
ಕುಟ್ಟಿ ಹಿಂದೆಳೆವ ಕೂರ ಕುರು ನಾಡಿಗರಿಗೇಂ
ಕೊರವಿಲ್ಲವೆನೆ ಬಾಯಿ ಬಾರದು ಮನನೊಂದು.
ಸಿರಿಗನ್ನಡ ಕತ್ತುರಿಯು ಪರಿಮಳ ವ್ಯಾಪಿಸಿರೆ
ನಾಡಿನೆಲ್ಲೆಡೆಯುಂ ಕವಿಕಾವ್ಯ ಪುರಾಣಗಳ್
ಮನಃಭಿತ್ತಿಯೊಳ್ ನಲಿನಲಿದು ಸತ್ ಸಾಂಸ್ಕೃತಿಕ
ದೀವಳಿ ನಡೆಯುವುದೈ ನಿತ್ಯ ದೃಷ್ಟಿಪಟಲದಲಿ.
ಕೇಳ್, ಕವಿ ಲಕ್ಷ್ಮೀಶ! ಈಗಳೇ ನಾಡ ನುಡಿ
ಏಳಿಗೆಗೆ ನೀನತಿ ಅವಶ್ಯಂ. ನುಡಿಗತ್ತುರಿಯು
ಜಗದಗಲ ಮುಗಿಲಗಲ ತೊಳಗಿ ಬೆಳಗುವೊಲ್ ಜಾ!
ತಲೆಬಾಗಿ ಕೈಮುಗಿದು ಮನತುಂಬಿ ಬೇಡುವೆನು
ಕನ್ನಡಿಗರ ಪುನರುದ್ಧಾರವಂ ಮುಂದಿಟ್ಟು.
ನಿನ್ನ ಕವಿ ಕಸ್ತೂರಿಯ ಕೆಲ ಪಂಕ್ತಿಗಳಂ
ನಾನೋದುವೆನಿಲ್ಲಿ ನೆನೆವೊಡೆ ನಿನ್ನಂ ಮನದಿ; →

ಶಿವನಂತೆ ಗಂಗಾ ಹಿಮಕರಾವಹಂ ರಮಾ
ಧವನಂತೆ ಗೋತ್ರೈಕ ಪಾಲಕಂ ಪಂಕರುಹ
ಭವನಂತೆ ಸಕಲ ಭುವನಾಶ್ರಯಂ ಶಕ್ರನಂತೆ ನಿಮಿಷ
ನಿಕರ ಕಾಂತನು!

ದಿವಸಾಧಿಪತಿಯಂತನಂತರತ್ನಂ ರಾಜ
ನಿವಹದಂತಪರಿಮಿತ ವಾಹಿನೀ ಸಂಗತನು
ಪವನಾಳಿಯಂತೆ ವಿದ್ರುಮಲತಾ ಶೋಭಿತಂ
ನಾನೆಂದುದಧಿ ಮೆರೆದುದು ||

ಈಯೊಂದು ನುಡಿಗಟ್ಟು ಸಾಲ್ಗುಂ ತವ ಕಾವ್ಯದ
ಕಿರು ಪರಿಚಯಮಂ ನೀಡುವೊಡಿಲ್ಲಿ ಹೇ, ಕವಿಯೆ !
ಕನ್ನಡದ ಕತ್ತುರಿಯೆನಿಸಿದ ನಿನಗೆ ಕೈಮುಗಿವೆ!
ಮೇಣ್ ಕರುಣಾನಂದ ಪೂತ ಹೃನ್ಮನದಿಂದೆ
ಆಹ್ವಾನಿಸುವೆ ನಿನ್ನ! ಕನ್ನಾಡಿಗೆ ಬಂದೆಮ
ಬೆಂಗಾಯ್ವೈ ವರಕವಿಯೆ !

—o—

# ಶ್ರದ್ಧೆ

ಶ್ರದ್ಧೆಯಿಲ್ಲದಾವ ಕಜ್ಜವೂ
ಕೈಗೂಡದು ಕಣ !
ಅರೆ ಬರೆ ಇಚ್ಛೆ, ಅರೆ ಬರೆ ಕೆಲಸ
ಆಸಕ್ತಿ ಶ್ರಮ ನಿಷ್ಠೆಗಳಿಲ್ಲದೆ
ನರಳಿ ಹೊರಳಿ ಧೂಳಾಗಿ
ಮಣ್ಣು ಹುಡಿಯಲಿ ಸೇರಿ ಹಾಳಾಗಿ
ಹೋಹುದಲ್ಲದೆ ಬೇರಿಲ್ಲಂ.
ಅಧಿಕಾರ ದರ್ಪದಿಂ
ಉಂಟು ಗೈದಾ
ಶ್ರದ್ಧೆ–ನಿಷ್ಠೆ–ಆಸಕ್ತಿಗಳ್
ತಳಪಾಯವಿಲ್ಲದ ಗುಡಿಯನೆ
ಸರಿಯುಕ್ಕು.
ಮಾನವನ ಎದೆಯಂತರಾಳದಿಂ
ಶ್ರದ್ಧೆ–ಶ್ರಮನಿಷ್ಠೆ–ಆಸಕ್ತಿಗಳ್
ಮೂಡಿ ಬಂದೊಡೆ ಮಾತ್ರಮೆ
ನಿಜ ಜೀವನಕೆ ಉಲ್ಲಸಪೂರ್ಣ ನಾಂದಿ !

—o—

# ಗಗನ ಭೂಷಣಂ ಚಂದ್ರೋದಯಂ

ಮುಸ್ಸಂಜೆವೆಣ್ಣು ಪಿಂಜರಿದು ಕಾಳ
ವರ್ಣಾಂತ ನಿಶಾಕಾಳಿ ಮುಂಬರಿಯೆ
ಜಗಜಗಿಪ ನಕ್ಷತ್ರಗಳ ಮಾಲೆಸೂಡಿ
ಜಗವೆಲ್ಲ ನಿದ್ದೆಗೆತ್ತುದು ತಣ್ಣಗೆ.

ಮಂದಮಾರುತಂ ಒಯ್ಯನೊಯ್ಯನೆಯೆ
ತೀಡಿ ತಾ ಬರುತಿರೆ ಗಗನ ದೇಶದಿ
ಶಶಿಯಿಲ್ಲದ ನಿಶಿ ವೈರಿಯೆನೆ ಕುಣಿದು
ಕಣ್ತೆವಿದಳ್ ಮುಖಭಂಗಗೈವವೊಲ್ !

ಸದ್ದಿಲ್ಲದ ಶಾಂತಿಯುಲಿ ವ್ಯೆಮರೆತು
ಬಿಮ್ಮನೆ ಬಿಗಿದವೊಲ್ ನೆರೆ ಪ್ರಕಾಶಿತ
ಕೃಷ್ಣ ಮೋಹನೀಯ ಭುವನ ಮಂಡಲ
ದೀಪ ಮಾಲಾ ಶುಶೋಭಿ ಸುಂದರಂ !

ನೀಲ ಸೀಮೆಯುಂಚಲಿ ಧವಳರಾಗ
ತುಳುಕಿದವೊಲ್ ಮೆಲ್ಲುಮೆಲ್ಲನೆ ಮುಳುಗುತ
ಮೂಡಿ ಬಂದನದೊ ಸುಂದರ ಚಂದಿರ
ಬೆಳದಿಂಗಳ ಬೆಳ್ನಗೆಯ ತಾ ಹರಿಸಿ !
ಗಗನ ಭೂಷಣಂ ಚಂದ್ರೋದಯಂ !

—o—

ಆವಾವ ಜನುಮಗಳಲಿ ಪಡೆದ ಪರಿಪುಣ್ಯದ
ಹೇರಾಶಿಯೋ ಘನಿಸಿ ನೀನಿಂದು ಮಂದಾರ
ಪುಷ್ಪವಾಗಿ ಸಂಜನಿಸಿದ್ದೈ ಲೋಕ ಮೋಹನೀ
ಸ್ವರೂಪಂಬೆತ್ತು. ದಳದಳಗಳರಳೆ ರನ್ನದ
ಕರಂಡಂ ಬಿರಿದು ನರುಗಂಪೊಸರಿ ಪರಿಸರಂ
ಘಮಘಮಿಸುತಿದೆ ಧವಳಿಮಾ ಕೀರ್ತಿ ತಾನಾಗಿ!
ಪಚ್ಚ ಪಲ್ಲವ ಪಾಣಿ ಪೀಠದಲಿ ಮಂಡಿಸಿರೆ
ಮಂದಮಾರುತಂ ತನ್ನ ಮೋಹಕ ರಾಣಿಯೆನೆ
ನಲ್ಮೆಯಿಂ ಬಲ್ಮೆಯುಂ ಮುದ್ದಿಸೆ, ನಲಿಯುವೆ ನೀ
ಅತ್ತಿತ್ತ ತಲೆದೂಗಿ ಪೆರ್ಮೆಯಿಂ ತೋಷವೆತ್ತು!
ಲೋಕಾಲಯದ ಲೋಗರ್ ಮನಮೆಚ್ಚಿ ಪೂಜೆಗೆ
ಒಯ್ವರ್ ಗುಡಿಗೆ ಮಂದರೋದ್ಧರನ ಮನಃಪ್ರಿಯ
ಮಂದಾರ ಪಾರಿಜಾತ ಪುಷ್ಪ ನೀನೆಂದು. ಹೇ,
ಮಧುರ ಮಂದಾರ ಪುಷ್ಪವೇ! ನಿನ್ನಂ ಸಾಲು
ಸಾಲೆನೆ ಸರಿ ಹೊಂದಿಸಿ ಕಟ್ಟಿರೆ ಸತಿಯರ್ ಸೃಷ್ಟಿ
ಬ್ರಹ್ಮನಿಗರ್ಪಿತಂ ಸುಂದರ ಹಾರವು ತಾನೈಸಿ.
ಓ ದೇವ! ನೀನಲ್ಲದಿನ್ನಾರ್ ಈ ಪರಮ
ಪುಷ್ಪಕೋಟಿಯಂ ಸೃಜಿಸಬಲ್ಲರ್ ಲೋಕದೊಳ್?
ಆವಾವ ಮಂತ್ರ ತಂತ್ರವೈ ನಿನ್ನ ಚಿರಂತನ
ರಮಣೀಯ ಕಾರ್ಯಕಾರಣ ಕೃತಿಗೆ? ತವ ಶುಭ್ರ
ಸೃಷ್ಟಿಶೀಲತೆಗೆ ನಮೋ! ರಸಜ್ಞತೆಗೆ ನಮೋ!

—o—

ಮುಸ್ಸಂಜೆ ಕವಿದು ಬರೆ ತವಕಿಪುದು
ಮನವೆನ್ನ ಶ್ರೀ ಗುರುವಿನ
ಅಮೃತ ವಚನವನಾಲಿಪ ಯೋಗ
ಭೋಗದಾಸೆಯುಕ್ಕುಕ್ಕಿ !

ಶ್ರೀ ರಾಮಕೃಷ್ಣ ಪರಮಹಂಸರ
ಅನನ್ಯ ಅನುಭವ ರಸ
ತೀರ್ಥಯಾತ್ರೆಯ ವಚನ ವೇದದಲಿ
ಮುಳುಗೇಳುವ ಹುಮ್ಮಿನಲಿ.

ದಕ್ಷಿಣೇಶ್ವರ ದೇಗುಲದ ಪರಮ
ಸಂನ್ಯಾಸಿಯ ಅಸ್ಖಲಿತ
ಕಂಠದಿ ಮೊಳಗುವ ರಸವಾಹಿನಿಯ
ಸಲಿಲದಲಿ ಮುಳುಗೇಳಲ್.

ಶ್ರೀ ಗುರುವಿನ ಧ್ಯಾನದ ಭಕ್ತಿರಸ
ಹೊರಸೂಸಿ ಲೆಕ್ಕಣಿಕೆಯ
ಮಸಿಯೊರತೆಯಲಿ ಹರಿವುದು ಕವಿಪಿಕ
ಹಾಡುತಿರೆ ರಾಗದಲಿ ಮನದುಂಬಿ.



# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧೭) ಮನೋನ್ಮಣಿ

೧೮) ಸಂತ್ರಾಸಿನಿ

೧೯) ಆಸೆಯ ಸುಳಿಯಲ್ಲಿ

೨೦) ಲಿಯೋನಾ

೨೧) ಶ್ರೀಹರ್ಷಲಾ

(ಕವಿತಾ ಸಂಕಲನ)

೨೨) ಗಗನ ಕುಸುಮ

೨೩) ಜೀವನ ಕುಸುಮ

೨೪) ಕಸ್ತೂರಿ ಮಾಲಿಕಾ

೨೫) ಮಂದಾರ ಮಾಲಿಕಾ

೨೬) ಚಂಪಕ ರಾಜಿ

೨೭) ನಾದ ಬಿಂದು

೨೮) ವಿಜಯ ಗಾಥಾ

೨೯) ಗಾನತೀರ್ಥ

೩೦) ಮಂಗಳ ಭಾರತಿ

೩೧) ಕಲ್ಯಾಣ ಭಾರತಿ (ಅಚ್ಚಿನಲ್ಲಿ)

೩೨) ಬಕುಳ ರಾಜಿ (ಅಚ್ಚಿನಲ್ಲಿ)

(ಸಂಜೀವನ ಕಾವ್ಯ)

೩೩) ರಾಗಾನುರಾಗಿಣಿ

೩೪) ಉತ್ತರೋತ್ತರಣಿ

(ಗದ್ಯ ಕಾವ್ಯ)

೩೫) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೩೬) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೩೭) ದೂರ ದೇಶದಲ್ಲಿ

೩೮) ಬೆಳದಿಂಗಳ ರಾತ್ರಿ

೩೯) ವಿಶೇಷ ಸುದ್ದಿ

೪೦) ರಂಗನ ಸಾಹಸ

೪೧) ಓಹಿಯೋಜ ಸರೋವರ

---

ಲಕ್ಷ್ಮೀ ಪ್ರಕಾಶನ

7, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು–560 025